# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್.

ರಿಜಿಸ್ಟರ್ ನಂ. ಕೆಆರ್‌ಎನ್‌ಎಸ್ - 19

4ನೇ ವರ್ಷ 29ನೇ ಸಂಚಿಕೆ ಕೊಪ್ಪ 16-3-1986 ಭಾನುವಾರ ಬೆಲೆ 40ಪೈಸೆ


## ವೈಯಕ್ತಿಕ ಇಷ್ಟಾನಿಷ್ಟ ಮತ್ತು ಸಾರ್ವಜನಿಕ ಸಂಸ್ಥೆ

ಮೊನ್ನೆ 15ನೇ ತಾರೀಖಿನ ಚಿಕ್ಕಮಗಳೂರಿನ ಪತ್ರಿಕೆಯೊಂದರಲ್ಲಿ ಕೊಪ್ಪ ಪುರಸಭೆಯ ಸ್ಥಳೀಯ ಜಾಹೀರಾತೊಂದು ಪ್ರಕಟವಾಯಿತು. ಪುರಸಭೆಗೆ ಸೇರಿದ ಸಂತೆಯ ಮಳಿಗೆಗಳಲ್ಲಿ ವ್ಯಾಪಾರ ಮಾಡುವ ಹಕ್ಕು, ಮಾಂಸದ ಅಂಗಡಿ, ಮೀನು ಮಾರ್ಕೆಟ್ ಮುಂತಾದವುಗಳಲ್ಲಿನ ಮಾರಾಟದ ಹಕ್ಕು, ತೆಂಗಿನ ಮರದಿಂದ ಕಾಯಿ ಕೀಳುವ ಹಕ್ಕು ಮುಂತಾದುವುಗಳ ಲೀಸ್ ಆಕ್ಷನ್ 23-3-86ರ ಭಾನುವಾರ ನಡೆಯಲಿದ್ದು ಅದರ ಬಗೆಗಿನ ಹರಾಜು ಪ್ರಕಟಣೆ ಇದಾಗಿತ್ತು. ಈ ಪ್ರಕಟಣೆ ನಮ್ಮ ಪತ್ರಿಕೆಗೆ ಬಾರದಿದ್ದಾಗ ಸಹಜವಾಗಿ ನಾನು ಕುತೂಹಲಗೊಂಡು ಪುರಸಭಾ ಕಚೇರಿಯಲ್ಲಿ ವಿಚಾರಿಸಿದೆ. ಈ ಜಾಹೀರಾತನ್ನು ಸದರಿ ಜಿಲ್ಲಾ ದಿನಪತ್ರಿಕೆಗೆ ಮತ್ತು ತೀರ್ಥಹಳ್ಳಿಯಿಂದ ಪ್ರಕಟವಾಗುವ ಒಂದು ಪತ್ರಿಕೆಗೆ ಮಾತ್ರ ಕೊಡಲು ಅಧ್ಯಕ್ಷರು ಹೇಳಿದ್ದಾರೆ ಎಂದು ತಿಳಿಯಿತು.

ನಮ್ಮ ಪತ್ರಿಕೆ ಶುರುವಾಗಿ ಈಗ್ಗೆ ನಾಲ್ಕು ವರ್ಷ ದಾಟಿತು. ಈವರೆಗೂ ಪುರಸಭೆಯ ಯಾವುದೇ ಜಾಹೀರಾತು ನಮ್ಮ ಪತ್ರಿಕೆಗೆ ಬಾರದೆ ಹೋದುದಿಲ್ಲ. ಕೆಲವು ವೇಳೆ ನಮ್ಮ ಪತ್ರಿಕೆಯ ಕಡೇ ಪುಟ ಮುದ್ರಣಕ್ಕೆ ಹೋಗುವ ವೇಳೆಗೆ ಸರಿಯಾಗಿ ಪುರಸಭೆಯ ಜಾಹೀರಾತು ಬಂದು ಅದನ್ನು ಪ್ರಕಟಿಸಲಿಕ್ಕಾಗಿ ಪತ್ರಿಕೆಯ ಪ್ರಕಟಣೆಯನ್ನು ಅಲ್ಪ ಸ್ವಲ್ಪ ತಡ ಮಾಡಿದ ಪ್ರಸಂಗಗಳು ಸಹ ಇವೆ.

ಸ್ಥಳೀಯವಾಗಿ ಪ್ರಚಾರವಾಗ ಬೇಕಾದ ಒಂದು ವಿಚಾರ ಹೀಗೆ ಸ್ಥಳೀಯ ಪತ್ರಿಕೆಯಲ್ಲಿ ಬರಬೇಕೆಂಬುದು ಸಾಮಾನ್ಯ ಪರಿಜ್ಞಾನ. ಅದಕ್ಕೊಂದು ಕಾನೂನಿನ ನಿಯಮವೇ ಬೇಕೆಂದಿಲ್ಲ. ಇದರ ಮೇಲೆ ನೆರೆಹೊರೆಯ ಪತ್ರಿಕೆಗಳಲ್ಲೋ ಜಿಲ್ಲಾ ಪತ್ರಿಕೆಯಲ್ಲೋ ಪ್ರಕಟ ಪಡಿಸುವುದು ಪುರಸಭೆಯ ವಿವೇಚನೆ ಮತ್ತು ಹಣಕಾಸಿನ ಸಾಧ್ಯಾಸಾಧ್ಯತೆಗೆ ಬಿಟ್ಟ ವಿಚಾರ. ಹೀಗೆ ಸ್ಥಳೀಯ ಪತ್ರಿಕೆಯಲ್ಲಿ ಪ್ರಕಟಿಸಬೇಕಾದ್ದು ಒಂದು ನೇರ ನಡವಳಿಕೆಯ ನೀತಿಯು ಪ್ರಶ್ನೆಯೂ ಹೌದು.

ಇದು ತಪ್ಪಿದೆಯೆಂದರೆ ಈ ನೀತಿ ಮತ್ತು ಸಾಮಾನ್ಯ ಪರಿಜ್ಞಾನ ಎಲ್ಲೋ ತಪ್ಪಿವೆ ಎಂದೇ ಅರ್ಥ. ಇದಕ್ಕೂ ಪುನಃ ಒಂದು ಕಾನೂನು ಪುಸ್ತಕದ ನಿಯಮವೇ ಬೇಕಾಗಿಲ್ಲ.

ನಮ್ಮ ಪತ್ರಿಕೆಗೆ ಜಾಹೀರಾತು ಯಾಕೆ ನೀಡಲಿಲ್ಲ ಎಂಬುದು–ಕಳೆದೊಂದು ತಿಂಗಳ ಕೊಪ್ಪದ ವಿದ್ಯಮಾನಗಳನ್ನು ಗಮನಿಸಿರುವ ಓದುಗರಿಗೆ ಸಲೀಸಾಗಿ ಅರ್ಥವಾಗುವ ವಿಚಾರ. ಆದರೆ ಜಾಹೀರಾತು ಇರುವುದು ಸಾರ್ವಜನಿಕರಿಗೆ ತಿಳುವಳಿಕೆ ನೀಡುವುದಕ್ಕಾಗಿ. ಅದನ್ನು ಕೊಡುವುದು ಅಥವಾ ಕೊಡದಿರುವುದು ಯಾರದೋ ಮರ್ಜಿಗೆ ಬಿಟ್ಟ ವಿಚಾರ ಖಂಡಿತಾ ಅಲ್ಲ.

ಪತ್ರಿಕೆಗಳ ಬೆಳವಣಿಗೆಗೆ ಜಾಹೀರಾತಿನ ಆದಾಯವೂ ಬಹಳ ಮುಖ್ಯ ನಿಜ. ಆದರೆ ನಮ್ಮ ಪತ್ರಿಕೆ ಜಾಹೀರಾತಿನ ಆದಾಯವನ್ನೇ ಪ್ರಮುಖವಾಗಿ ನೆಚ್ಚಿಕೊಂಡಿಲ್ಲ. ಆದರಲ್ಲೂ ಯಾರದೋ ಮರ್ಜಿಯ ಭಿಕ್ಷೆಯನ್ನಂತೂ ನಾವು ಯಾವತ್ತೂ ಅಪೇಕ್ಷಿಸಿಲ್ಲ. ಈ ಪತ್ರಿಕೆಗೆ ನೀವು ಓದುಗರು ಕೊಡುವ ಚಂದಾ ಹಣವೇ ಜೀವಾಳ. ಈವರೆಗೂ ಹೀಗೆಯೇ ಉಳಿದು ಬೆಳೆದಿರುವ ಪತ್ರಿಕೆ ಇನ್ನು ಮುಂದೆ ಕೂಡ ಹೀಗೇ ಉಳಿಯುತ್ತದೆ, ಹೀಗೇ ಬೆಳೆಯುತ್ತದೆ

ಆದರೆ ಪುರಸಭೆಯಂತಹ ಸಾರ್ವಜನಿಕ ಸಂಸ್ಥೆಯನ್ನು ವೈಯಕ್ತಿಕ ಇಷ್ಟಾನಿಷ್ಟಗಳ ಚಲಾವಣೆಗೆ ಬಳಸುವುದು ಮಾತ್ರ ಅನ್ಯಾಯ. ಇಂಥ ಅನ್ಯಾಯವನ್ನು ಕೇಂದ್ರ–ರಾಜ್ಯ ಸರ್ಕಾರಗಳು ಮಾಡಿದಾಗ ಸಹ ನ್ಯಾಯಾಲಯಗಳು ಅಂಥ ನಡವಳಿಕೆಯನ್ನು ತಳ್ಳಿ ಹಾಕಿವೆ, ಖಂಡಿಸಿವೆ. ಇಲ್ಲಿ ನಾವೂ ಕೂಡ ಇಷ್ಟನ್ನೇ ಪ್ರತಿಪಾದಿಸುತ್ತಿದ್ದೇವೆ ಅಷ್ಟೆ

ಇಂಥ ನೀತಿಯ–ನಡವಳಿಕೆಯ ವಿಚಾರಗಳಲ್ಲಿ ಪುರಸಭೆ ಲೋಪವೆಸಗದಂತೆ ನೋಡಿಕೊಳ್ಳಬೇಕಾದ ಮುಖ್ಯಾಧಿಕಾರಿಯಾದರೂ ಯಾಕೆ ನಿಷ್ಕ್ರಿಯರಾದರು ಎಂಬುದಕ್ಕೆ ಅವರದೇ ಯಾವುದಾದರೂ ದೌರ್ಬಲ್ಯಗಳು ಕಾರಣವೋ ಅಥವಾ ಇದು ಈ ಸ್ಥಳೀಯ ಸಂಸ್ಥೆಯ ನಡವಳಿಕೆಯ ರೀತಿಗೆ ಹಿಡಿದ ಕನ್ನಡಿಯೋ— ಹೇಳುವುದು ಕಷ್ಟ.

—ಸಿರಿಮನೆ ನಾಗರಾಜ್.

## ಕುಂಚೆಬೈಲಿನಲ್ಲಿ ಕೋಳಿ ಅಂಕ

ಶೃಂಗೇರಿ: ಇಲ್ಲಿಗೆ ಸಮೀಪದ ಕುಂಚೆಬೈಲಿನಲ್ಲಿ ಇಚೆಗೆ ಕೋಳಿ ಅಂಕದಲ್ಲಿ ನಿರತವಾಗಿದ್ದ ಭಾರಿ ಗುಂಪೊಂದರ ಮೇಲೆ ಇಲ್ಲಿನ ಸಬ್‌ಇನ್‌ಸ್ಪೆಕ್ಟರ್ ಶಶಿಧರ್ ಮತ್ತು ಸಿಬ್ಬಂದಿ ಹಠಾತ್ ದಾಳಿ ನಡೆಸಿ, 4 ಜನರನ್ನು ಬಂಧಿಸಿ 10 ಕೋಳಿಗಳನ್ನು ವಶ ಪಡಿಸಿ ಕೊಂಡರು. ಅವುಗಳ ಹರಾಜಿನಿಂದ 400 ರೂ.ಗೂ ಹೆಚ್ಚು ಹಣ ಸಂಗ್ರಹವಾಗಿರುವುದಾಗಿ ಶಶಿಧರ್ ತಿಳಿಸಿದ್ದಾರೆ.

## ಕೊಪ್ಪ ನೀರು ಪೂರೈಕೆ ಸುಧಾರಣೆಯ 10 ಲ[ಕ್ಷ] ರೂ. ಯೋಜನೆ 86-87ರ ಬಜೆಟ್‌ಗೆ ಸೇರ್ಪ[ಡೆ]

ಕೊಪ್ಪ: ಇಲ್ಲಿನ ನೀರು ಸರಬರಾಜು ಸುಧಾರಣೆಗಾಗಿ ಪುರಸಭೆ ಸಲ್ಲಿಸಿರುವ 10 ಲಕ್ಷ ರೂ.ಗಳ ಅಂದಾಜು ವೆಚ್ಚದ ಕಾಮಗಾರಿ ರಾಜ್ಯ ಸರ್ಕಾರದ 1986–87ರ ಬಜೆಟ್‌ನಲ್ಲಿ ಸೇರ್ಪಡೆಯಾಗಿರುವುದಾಗಿ ತಿಳಿದು ಬಂದಿದೆ. ಆದರೆ ಕಾಮಗಾರಿಯಲ್ಲಿ ಇನ್ನೂ ಕೆಲವು ಅಂಗಗಳು ಸೇರ್ಪಡೆಯಾಗಬೇಕಾಗಿದ್ದು, ಅದಕ್ಕೆ ಈ ಮೊತ್ತ ಸಹ ಕನಿಷ್ಠವಾಗುತ್ತದೆಂದೂ ಹೆಚ್ಚುವರಿ ಮಂಜೂರಾತಿಗಾಗಿ ಪುರಸಭೆ ಪುನಃ ಸರ್ಕಾರವನ್ನು ಕೋರಿದೆಯೆಂದೂ ಗೊತ್ತಾಗಿದೆ.

ಹರಿಹರಪುರ ಹೊಳೆಯಲ್ಲಿ ನೀರೆತ್ತಲು ಈಗಿರುವ 40 ಅಶ್ವಶಕ್ತಿಯ ಪಂಪ್‌ಗೆ ಬದಲು 60 ಅಶ್ವಶಕ್ತಿಯ ಪಂಪ್ ಜೋಡಣೆ, ಕೊಪ್ಪದಲ್ಲಿ 50 ಸಾವಿರ ಗ್ಯಾಲನ್ ಹಿಡಿಸುವ ಇನ್ನೊಂದು ಟ್ಯಾಂಕ್ ಮತ್ತು ನೀರು ಸೋಸುವ ತೊಟ್ಟಿ (ಫಿಲ್ಟ್ರೇಶನ್ ಬೆಡ್)–ಇವುಗಳ ನಿರ್ಮಾಣ ಹಾಲಿ ಅಂದಾಜಿನಲ್ಲಿ ಸೇರಿವೆ. ಆದರೆ, ಹೊಳೆಯ ದಂಡೆ ಕುಸಿಯುತ್ತಿದ್ದು ಅಲ್ಲಿಗೆ ಕಟ್ಟಣ ಕಟ್ಟ ಬೇಕಾಗಿರುವುದು ಮತ್ತು ಪಂಪ್ ಹೌಸಿನ ಪುನರ್ನಿರ್ಮಾಣ ಕೊಪ್ಪದಲ್ಲಿ ಇನ್ನೊಂದು ನೀರೆತ್ತುವ ಪಂಪ್ ಹಾಕ ಬೇಕಾಗಿರುವುದು, ನೀರು ಶುದ್ಧೀಕರಣಕ್ಕಾಗಿ ಮೂರ್ನಾಲ್ಕು ತೊಟ್ಟಿಗಳ ನಿರ್ಮಾಣ, ಕೆರೆಯ ನೀರನ್ನೂ ಸಹ ಸೋ[ಸಲು] ಆಗುವಂತೆ ಇನ್ನೊಂದು ಸೋಸುವ ತೊಟ್ಟಿ–ಇವೇ ಮುಂತಾದುವುಗಳ ನಿರ್ಮಾ[ಣ] ಕೂಡ ಇದರೊಟ್ಟಿಗೆ ಆಗಬೇಕಾಗಿದ್ದು, ಅ[ವು]ಗಳಿಗಾಗಿ ಇನ್ನೂ 5ರಿಂದ 10 ಲಕ್ಷ ರೂ[ಪಾಯಿ]ಗಳಷ್ಟು ಬೇಕಾಗಬಹುದೆನ್ನಲಾಗಿದೆ.

ಈ ಹಣವನ್ನೂ ಸಹ ಮಂಜೂರ್ಮಾಡ[ುವ]ವಂತೆ ಪುರಸಭೆ ಸರ್ಕಾರವನ್ನು ಕೋರಿದೆ.

## ಪೌರಸೇವಾ ನೌಕರರ ಮುಷ್ಕರ ಅಂತ್ಯ

ಕೊಪ್ಪ: ಪೌರಸೇವಾ ನೌಕರರಿಗೂ ರಾಜ್ಯ ಸರ್ಕಾರಿ ನೌಕರರ ನಿಯಮಾವಳಿ (ಕೆ. ಸಿ. ಎಸ್. ಆರ್.)ಗಳನ್ನು ಅನ್ವಯಿಸಬೇಕೆಂಬ ತಮ್ಮ ಪ್ರಮುಖ ಬೇಡಿಕೆಯ ಬಗ್ಗೆ ಏಪ್ರಿಲ್ ಮಾಸಾಂತ್ಯದೊಳಗೆ ತೀರ್ಮಾನ ಕೈಗೊಳ್ಳುವುದಾಗಿ ನಗರಾಭಿವೃದ್ಧಿ ಸಚಿವರು ಮತ್ತು ಮುಖ್ಯ ಮಂತ್ರಿಗಳು ನೌಕರರ ಸಂಘಕ್ಕೆ ಭರವಸೆ ಕೊಟ್ಟ ಮೇರೆಗೆ ರಾಜ್ಯಾದ್ಯಂತ ಪೌರ ಸೇವಾ ನೌಕರರು ಮಾ[ರ್ಚ್] 6 ರಿಂದ ನಡೆಸುತ್ತಿದ್ದ ಮುಷ್ಕರವನ್ನು ಹಿಂತೆಗೆದು ಕೊಂಡಿದ್ದಾರೆ.

## ಭೂ ಸಾರ ಸಂರಕ್ಷಣೆ ಕಚೇರಿ ಎತ್ತಂಗಡಿ?

ಕೊಪ್ಪ: ಇಲ್ಲಿರುವ ಪಶ್ಚಿಮ ಘಟ್ಟಗಳ ಅಭಿವೃದ್ಧಿ ಯೋಜನೆಯಡಿಯ ಭೂಸಾರ ಸಂರಕ್ಷಣೆ ಅಧಿಕಾರಿಯವರ ಕಚೇರಿಯನ್ನು ನರಸಿಂಹರಾಜಪುರಕ್ಕೆ ಸ್ಥಳಾಂತರಿಸುವ ವಿಚಾರವೊಂದು ಇಲಾಖೆಯ ಮೇಲಧಿಕಾರಿಗಳ ಪರಿಶೀಲನೆಯಲ್ಲಿದೆಯೆಂದು ಹೇಳಲಾಗಿದೆ

ಈ ಕಚೇರಿಯ ವ್ಯಾಪ್ತಿಗೆ ನ.ರಾ. ಪುರ, ಶೃಂಗೇರಿ ತಾ॥ಗಳೂ ಸೇರಿದ್ದು, ಇಲ್ಲಿಗಿಂತ ನ. ರಾ. ಪುರದಲ್ಲಿ ಹೆಚ್ಚು ಕೆಲಸ ಇರುವುದೆಂಬ ಕಾರಣಕ್ಕೆ ಕಚೇರಿಯನ್ನು ಅಲ್ಲಿ ನೆಲೆಗೊಳಿಸುವ ಯೋಚನೆ ಎನ್ನಲಾಗಿದೆ.

ಆದರೆ ಕೊಪ್ಪದ ಕೆಲವು ಧುರೀಣರು ಈ ಸ್ಥಳಾಂತರ ಅನಗತ್ಯ ಎಂದೂ ಕೊಪ್ಪದಲ್ಲಿ ಇದ್ದರೆ ಮೂರು ತಾ॥ಗಳಿಗೆ ಕೇಂದ್ರವಾಗಿರುತ್ತದೆಂದೂ ಅಭಿಪ್ರಾಯ ಪಟ್ಟಿದ್ದಾರೆಂದು ತಿಳಿದು ಬಂದಿದೆ.

ಕೊಪ್ಪ, ಶೃಂಗೇರಿಗಳಲ್ಲಿ ಕೆಲಸ ಕಮ್ಮಿ ಎನ್ನುವುದು ತಪ್ಪು. ಇಲಾಖೆಗೆ ಸಾಕಷ್ಟು ಹಣ ಮಂಜೂರು ಮಾಡಿದರೆ ಮತ್ತು ಅಲ್ಲಿನ ಅಧಿಕಾರಿಗಳು ವಂಚನೆ–ಭ್ರಷ್ಟತೆ ಬಿಟ್ಟು ಕೆಲಸ ಮಾಡಿದರೆ ಈ ಇಲಾಖೆಯಿಂದ ಆಗಬಹುದಾದ ಕೆಲಸಗಳು ಇಲ್ಲೂ ಯಥೇಚ್ಛವಾಗಿವೆಯೆಂದು ಇವರ ವಾದ.

(ಖಾಸಗಿ ಮಟ್ಟದಲ್ಲಿ, ಜಮೀನು ಸಮತಟ್ಟು ಮಾಡುವುದು, ಜಮೀನು ಸುತ್ತ ಅಗಳು ತೋಡುವುದು, ನೀರಾವರಿ ಕೆರೆ ನಿರ್ಮಾಣ ಮುಂತಾದುವು ಈ ಕಚೇರಿಯ ವ್ಯಾಪ್ತಿಗೆ ಬರುವ ಕೆಲಸಗಳು.)

ಈ ವಿಚಾರವನ್ನು ಸಚಿವ ಗೋವಿಂದಗೌಡರ ಗಮನಕ್ಕೂ ತಂದಾಗ ಅವರು ಮೇಲಧಿಕಾರಿಗಳ ಹತ್ತಿರ ಪೂರ್ಣ ವಿವರಗಳನ್ನು ಪಡೆದು, ಅನಂತರ ಸೂಕ್ತವಾದ ಆದೇಶ ಹೊರಡಿಸುವಂತೆ ಸಂಬಂಧಪಟ್ಟವರೊಂದಿಗೆ ವ್ಯವಹರಿಸುವುದಾಗಿ ಭರವಸೆ ಕೊಟ್ಟಿದ್ದಾರೆನ್ನಲಾಗಿದೆ.

## ಕಾವಡಿ-ಶಾನುವಳ್ಳಿ ಮೂಲಕ ಬಸ್ ಸಂಚಾರ

ಕೊಪ್ಪ: ಬಹಳ ದಿನಗಳಿಂದ ಜನ ಒತ್ತಾಯಿಸುತ್ತಿದ್ದ ಕಾವಡಿ–ಶಾನುವಳ್ಳಿ ಮಾರ್ಗದಲ್ಲಿ ಶಂಕರ್ ಕಂಪನಿಯ ಒಂದು ಬಸ್ ಸಂಚಾರ ಮಾರ್ಚ್ 1ರಿಂದ ಆರಂಭವಾಗಿದೆ

ತೀರ್ಥಹಳ್ಳಿ ತಾಲ್ಲೂಕಿನ ಮೃಗವಧೆಯಿಂದ ಬೆಳಗ್ಗೆ 7ಕ್ಕೆ ಹೊರಟು, ತೀರ್ಥಹಳ್ಳಿ, ಕಮ್ಮರಡಿ, ಶಾನುವಳ್ಳಿ, ಬೇಗಾನೆ, ಕಾವಡಿ, ಶೃಂಗೇರಿ ಮೂಲಕ ಮೇಗೂರಿಗೆ ಬೆಳಗ್ಗೆ 11ಕ್ಕೆ ತಲುಪುತ್ತದೆ. ಅಲ್ಲಿಂದ ಮಧ್ಯಾಹ್ನ 2ಕ್ಕೆ ಹೊರಟು, ಸಂಜೆ 6ಕ್ಕೆ ಮೃಗವಧೆ ತಲುಪುತ್ತದೆ.

ಈ ಮಾರ್ಗಲ್ಲಿ ಬಸ್‌ಗಾಗಿ ಚಳುವಳಿಯ ಹಂತಕ್ಕೆ ಮುಟ್ಟಿದ್ದ ಗ್ರಾಮಸ್ಥರು ಈಗ ಸಾರಿಗೆ ಅಧಿಕಾರಿಗಳಿಗೂ ಶಂಕರ್ ಕಂಪೆನಿಗೂ ಧನ್ಯವಾದ ಸಲ್ಲಿಸಿದ್ದಾರೆ.

ಸದ್ಯವೇ ಈ ಮಾರ್ಗದಲ್ಲಿ ಇನ್ನೂ ಒಂದು ಬಸ್ ಓಡಾಡಲಿದೆಯೆಂದು ಗ್ರಾಮಸ್ಥರ ಮೂಲಗಳು ಹೇಳಿವೆ.

## ಕೊಪ್ಪ ಕೆ.ಪಿ.ಮಂ. ಫೋನ್

ವಿದ್ಯುತ್ ನಿಲುಗಡೆ ಮತ್ತಿತರ ತುರ್ತು ವಿಷಯಗಳ ಬಗ್ಗೆ ಕೊಪ್ಪದ ವಿದ್ಯುಚ್ಛಕ್ತಿ ಕಚೇರಿಗೆ ಫೋನ್ ಮಾಡಬಯಸುವವರು ಈಗಿರುವ ನಂ. 60 ಮಾತ್ರವಲ್ಲದೆ 165ನೇ ನಂಬರಿಗೆ ಸಹ ಫೋನ್ ಮಾಡಬಹುದೆಂದು ಸಹಾಯಕ ಇಂಜಿನಿಯರ್ ಕೇಶವಮೂರ್ತಿ ತಿಳಿಸಿದ್ದಾರೆ.


ಸಂಪಾದಕ, ಮುದ್ರಕ, ಪ್ರಕಾಶಕ:
ಸಿರಿಮನೆ ನಾಗರಾಜ್.
ಅಚ್ಚು: ದೀವಟಿಗೆ ಅಚ್ಚು ಕೂಟ, ಕೊಪ್ಪ.

## ಓದುಗರ ಪತ್ರಗಳು

### ನೈತಿಕ ಸ್ಥೈರ್ಯ ಹೆಚ್ಚಲಿ

ಪ್ರಿಯ ನಾಗರಾಜ್,

ನಿಮ್ಮ ಮೇಲಿನ ಹಲ್ಲೆಯ ಸುದ್ದಿ ನಮಗೆ ತೀವ್ರ ವ್ಯಸನವನ್ನುಂಟು ಮಾಡಿದೆ. ಎಲ್ಲ ಭಿನ್ನಾಭಿಪ್ರಾಯ, ಅನುಮಾನಗಳನ್ನೂ ಪತ್ರಿಕೆಯ ಮೂಲಕವೇ ಚರ್ಚಿಸಿ ಸ್ಪಷ್ಟ ಪಡಿಸಿಕೊಳ್ಳುವ ಅವಕಾಶವನ್ನು ನಿಮ್ಮ ಪತ್ರಿಕೆ ನೀಡಿರುವಾಗ ಸಂಪಾದಕರ ಮೇಲೆ ಹಲ್ಲೆ, ಹಿಂಸೆ ನಡೆಸುವುದು ಅಮಾನವೀಯ ಮತ್ತು ಶೋಚನೀಯ.

ಇಂಥ ಘಟನೆ ನಿಮ್ಮ ನೈತಿಕ ಸ್ಥೈರ್ಯವನ್ನೂ ವರ್ಚಸ್ಸನ್ನೂ ಕುಗ್ಗಿಸುವ ಬದಲು ಇನ್ನೂ ಹೆಚ್ಚಿಸುತ್ತದೆ ಎಂಬ ವಿಶ್ವಾಸ ನಮಗಿದೆ.

—ಯು.ಹೆಚ್.ಗಣೇಶ್
ಮತ್ತು ಗೆಳೆಯರು, ತೀರ್ಥಹಳ್ಳಿ.

## ಹವಾಮಾನ ವೈಪರೀತ್ಯ—ಮೃಗೀಯತೆ

ಶ್ರೀ ಸಿರಿಮನೆ ನಾಗರಾಜ್,

ಈಚೆಗೆ ಕೊಪ್ಪದಲ್ಲಿ ನಡೆದ ತಮ್ಮ ಮೇಲಿನ ಹಲ್ಲೆ ವಿಚಾರ ಕೇಳಿ ನೊಂದು ಬರೆಯುತ್ತಿದ್ದೇನೆ. ಈ ಬಗೆಗಿನ ಪತ್ರಿಕಾ ವರದಿಗಳನ್ನು ಗಮನಿಸಿದಾಗ ನಾವು ಎತ್ತ ಸಾಗುತ್ತಿದ್ದೇವೆ! ಮೃಗೀಯಸ್ವಭಾವದವರಾಗಿ ಮೃಗಗಳಿಗಿಂತ ಕೀಳು ಜೀವನಕ್ಕಿಳಿದಿದ್ದೇವೆಯೋ? ಇಲ್ಲವೇ ಹವಾಮಾನ ವೈಪರೀತ್ಯವೇ ಮೃಗೀಯ ಸ್ವಭಾವವನ್ನು ಕರುಣಿಸುತ್ತಿದೆಯೋ?.... ಈ ಸಂಶಯದ ಸುಳಿಯಲ್ಲಿ ಚಿಂತಿಸ ಬೇಕಾಗಿದೆ.

ಸಮಾಜದ ದುರ್ನಡತೆಗಳನ್ನು ಸದ್ದಡಗಿಸುವ ಪರಿಸ್ಥಿತಿಯಲ್ಲಿ ತಿಳಿಸೊಳಿಸುವ ಮತ್ತು ಹತೋಟಿಯಲ್ಲಿಡುವ ಹೊಣೆಗಾರಿಕೆ ಇರುವುದು ಎರಡು ವರ್ಗದಲ್ಲಿ ಮಾತ್ರ — ಒಂದು ರಕ್ಷಣಾ ಇಲಾಖೆ; ಇನ್ನೊಂದು, ಪತ್ರಿಕೆಗಳು. ಇವೆರಡೂ ಬೇಡವೆನ್ನುವ ರೀತಿ ಇಂದಿನ ದುಷ್ಟ ಶಕ್ತಿಗಳ ಅನಿಸಿಕೆ ಎನ್ನುವಂತಾಗಿದೆ.

ಇಂದು ಸಮಾಜದಲ್ಲಿ ಪ್ರಜ್ಞಾವಂತರು, ದೇಶಾಭಿಮಾನಿಗಳು ಶೇಕಡ ಹತ್ತರಷ್ಟಿದ್ದಾರೆ. ಅದರಲ್ಲಿಯೂ ಈ ಹತ್ತರಲ್ಲಿ, ಯಾವುದೇ ಅನ್ಯಾಯಗಳನ್ನು ನೋಡಿದರೂ "ನಮಗೇಕೆ?" ಎನ್ನುವವರು ಎಂಟನೆಯು/ಎಂಟುಮಂದಿ. ಸಮಾಜದ ಅನ್ಯಾಯಗಳನ್ನ, ಪುಂಡಾಟಿಕೆಗಳನ್ನ ಈಗ ಇರುವ ಶೇಕಡ ಹತ್ತು ಮಂದಿಯು ಖಂಡಿಸದಿದ್ದರೆ ಒಂದೆರಡು ವರ್ಷಗಳಲ್ಲಿ ಎಲ್ಲಿಗೆ ತಲುಪುತ್ತೇವೆಂದರೆ ನೂರಕ್ಕೆ ನೂರು ಪುಂಡಾಟಿಕೆಯಲ್ಲಿ (ಮನಸ್ಸಿಲ್ಲದಿದ್ದರೂ ಬಲವಂತವಾಗಿ) ಭಾಗಿಗಳಾಗುವುದರಲ್ಲಿ ಸಂದೇಹವೇ ಇಲ್ಲ.

ಈ ಹತ್ತು ಜನರ ಧ್ವನಿಯಾದರೂ ಸದ್ಯಕ್ಕೆ ಒಂದಾಗುವಂತಾದರೆ ಮುಂದಾಗುವ ಅನಾಹುತವನ್ನು ತಪ್ಪಿಸ ಬಹುದು. ಅನ್ಯಾಯವನ್ನು ಖಂಡಿಸೋಣ – ಅನಾಹುತಗಳನ್ನು ತಪ್ಪಿಸೋಣ.

—ಎಂ.ಐ.ಶ್ರೀನಿವಾಸಮೂರ್ತಿ
ಮೂಡಬಾಗಿಲು
ನರಸಿಂಹರಾಜಪುರ.ತಾ॥

## "ಒತ್ತಡಕ್ಕೆ ಮಣಿಯದೆ ಪತ್ರಿಕೆ ಮುನ್ನಡೆಸಿ"

ಪ್ರಿಯ ಶ್ರೀ ನಾಗರಾಜ್,

ತಮ್ಮ ಮೇಲೆ ನಡೆದ ಹಲ್ಲೆ ಕೇಳಿ ಬಹಳ ಖಂಡನೀಯ. ಪತ್ರಿಕೆಯನ್ನು ನೋಡಿ ಕೂಡ ಬಹಳ ಆಶ್ಚರ್ಯ ಹಾಗೂ ದಿಗ್ಭ್ರಮೆಯಾಯಿತು. ಕಾರಣ, ಇಲ್ಲಿಯವರೆಗೆ ಸುಮಾರು 4 ವರ್ಷದಲ್ಲಿ ಎಂತಹ ಪ್ರಚೋದನೆಗೂ ಒಳಗಾಗದೆ ಉತ್ತಮ ಹಾಗೂ ಮಾದರಿ ಪತ್ರಿಕೆಯಾಗಿ ನಡೆದು ಬಂದರೂ ಸಹ, ಅಂಥವರ ಮೇಲೂ ಕೈ ಮಾಡುತ್ತಾರಲ್ಲ ಎಂದು. ಏನೇ ಆದರೂ ನೀವು ದಯವಿಟ್ಟು ಮನಸ್ಸು ಬದಲಾಯಿಸದೆ, ಧೈರ್ಯದಿಂದ ಎದುರಿಸಿ. ಇಂಥ ಪರಿಸ್ಥಿತಿಗಳೆದುರು ಇನ್ನೂ ಹೆಚ್ಚಿನ ಯಶಸ್ಸು ಸಾಧಿಸುವುದೇ ಒಬ್ಬ ಪತ್ರಕರ್ತನ ಗುಣ. ಪತ್ರಿಕೆಯಲ್ಲಿ ವಿಷಯವನ್ನು ನೇರವಾಗಿ, ಸಾಮಾನ್ಯ ಜನರಿಗೂ ಅರ್ಥವಾಗುವಂತೆ ಬರೆಯುವುದರ ಮೂಲಕ ಯಾವುದೇ ರಾಜಕೀಯದ ಅಥವಾ ರಾಜಕಾರಣಿಯ ಒತ್ತಡಕ್ಕೆ ಮಣಿಯಬಾರದೆಂದೇ ನನ್ನ ಆಸೆ.

ತಮ್ಮ ನೇರ ಬರೆವಣಿಗೆಯ ಶೈಲಿಯನ್ನು ತಗ್ಗಿಸದೆ ಇನ್ನೂ ಉತ್ತಮ ಶೈಲಿಯ ಮೆರುಗನ್ನು ಪತ್ರಿಕೆಯು ಪಡೆದುಕೊಳ್ಳಲೆಂದು ಆಶಿಸುತ್ತೇನೆ.

—ಮನೋಜ್ ಎಸ್.ಡಿ. ಶಿವಪುರ.

## "ಖಂಡನೀಯ" —'ಶೃಂಕೊಸ.'

....ಕೊಪ್ಪದ 'ಮುಂಜಾವು' ಪತ್ರಿಕೆಯ ಸಂಪಾದಕರ ಮೇಲೆ ಹಲ್ಲೆಯ ಯತ್ನ ನಡೆದುದನ್ನು ನೋಡಿದರೆ, ಬಹುಶಃ ಸಣ್ಣ ಪತ್ರಿಕೆಗಳ ಬಗ್ಗೆ ಈ ರೀತಿಯ ಆಕ್ರೋಶ ಮಾಮೂಲಿಯೆನಿಸುತ್ತದೆ.

'ಮುಂಜಾವು' ಸಂಪಾದಕರ ಮೇಲೆ ಹಲ್ಲೆ ಯತ್ನ ನಡೆದಿದ್ದರ ಕಾರಣವಾಗಲಿ, ಅದರ ಹಿಂದೆ ಆ ಪತ್ರಿಕೆಯ ಧೋರಣೆಯಾಗಲಿ ನಮಗಿಲ್ಲಿ ಅಪ್ರಸ್ತುತ. ಆದರೆ 'ಹಲ್ಲೆ' ಎಂಬ ಶಬ್ದವೇ ನಮ್ಮನ್ನು ಚಿಂತನೆಗೆ ಹಚ್ಚಿದೆ. ತಮಗೆ ಅನ್ಯಾಯವಾದುದನ್ನು ಖಂಡಿಸಲು ಉತ್ತಮ ಮಾರ್ಗವೆ ತಿಳಿಯದವರನ್ನು ವಿದ್ಯಾವಂತರೆಂದಾಗಲಿ, ಸುಸಂಸ್ಕೃತರೆಂದಾಗಲಿ ನಾವು ಗುರುತಿಸಲು ಸಾಧ್ಯವೇ ಇಲ್ಲ. ಹಲ್ಲೆಗೆ ಮುಂದಾಗುವವರನ್ನು, ಅಮಾನವೀಯ ಕೃತ್ಯ ಮಾಡುವವರನ್ನು ಏನೆಂದು ಕರೆಯಬಹುದೆಂದು ನಮಗೆ ತಿಳಿಯುವುದಿಲ್ಲ. ಇಂತಹ ಕೀಳುಮಟ್ಟಕ್ಕೆ ಇಳಿಯುವವರು ಸಮಾಜದಲ್ಲಿ ಬಹಳ ಅಪಾಯಕಾರಿಗಳೇ ಸರಿ.

'ಮುಂಜಾವು' ಸಂಪಾದಕರ ಮೇಲಿನ ಹಲ್ಲೆಯ ಯತ್ನದ ಹಿನ್ನೆಲೆಯಲ್ಲಿ ಒಂದನ್ನಂತೂ ನಾವು ತಿಳಿಯಬಹುದು. ಸಣ್ಣ ಪತ್ರಿಕೋದ್ಯಮಕ್ಕೆ ಸ್ಪಷ್ಟ ಅಸ್ತಿತ್ವವನ್ನು ನೀಡುವುದಕ್ಕೆ ಸಂಸ್ಕಾರವಂತರೆನಿಸಿದ, ಇಪ್ಪತ್ತೊಂದನೇ ಶತಮಾನದೆಡೆಗೆ ಹೋಗುತ್ತಿರುವ ವಿದ್ಯಾವಂತ ನಾಗರೀಕರಿಗೂ ಮನಸ್ಸಿಲ್ಲ. ಇದೇ ಮುಂದುವರಿಸಿಕೊಂಡು ಹೋದಲ್ಲಿ ಸಮಾಜದ ಕೆಳಸ್ತರದಲ್ಲಿರುವ ಇಂಥ 'ಸಣ್ಣತನಗಳು' ಮೇಲ್ಪಂಕ್ತಿಯಲ್ಲಿ ಬೇರೂರಿಬಿಡುವುದರಲ್ಲಿ ಅನುಮಾನವಿಲ್ಲ. ಹೆಚ್ಚಿನ ಮಾನಸಿಕ ಉದ್ವಿಗ್ನತೆ ಹೊಂದಿರುವ ವ್ಯಕ್ತಿಗಳು ಕೊಂಚ ಆತ್ಮನಿರೀಕ್ಷಣೆ ಮಾಡಿಕೊಂಡು ಸ್ವಲ್ಪವಾದರೂ ಮನುಷ್ಯರಾಗಿರಲು ಯೋಗ್ಯರೆನಿಸಿಕೊಂಡರೆ ಎಲ್ಲ ವ್ಯವಸ್ಥೆಗೂ ಅನುಕೂಲವಾದೀತು.

—'ಶೃಂಕೊಸ': 5.3.86ರ ಸಂಪಾದಕೀಯದಿಂದ.

## "ಪತ್ರಿಕಾ ಕರ್ತವ್ಯದಲ್ಲಿ ರಾಜಿಸೂತ್ರ ಸಲ್ಲ"

ಪ್ರಿಯ ಮಿತ್ರ ನಾಗರಾಜ್,

ನಿಮ್ಮ ಮೇಲೆ ನಡೆದ ಹಲ್ಲೆಯ ವಿಷಯ ತಿಳಿಯಿತು. ಹಲ್ಲೆಗೆ ಕಾರಣರಾದವರ ಹದ್ದು ಮೀರಿದ ವರ್ತನೆ ಅತ್ಯಂತ ಖೇದಕರ. ತಮ್ಮ ಮೂಗಿನ ನೇರಕ್ಕೆ ತಕ್ಕಂತೆ ವಾರ್ತೆಗಳು ಪ್ರಕಟವಾಗದೆ ಹೋದಾಗ ಕೆಲವು ನಾಯಕರು ಹೀಗೆ ಸಾಮಾನ್ಯ ಜನನನ್ನು ಬಳಸಿ, ಇಂಥ ಹೇಯ ಕೃತ್ಯಗಳನ್ನು ನಡೆಸುತ್ತಾರೆ. ಈ ಸಂದರ್ಭದಲ್ಲಿ, ಗ್ರಾಮಾಂತರ ಪತ್ರಿಕೆಗಳಿಂದ ಜನಸಾಮಾನ್ಯರಿಗೆ ಆಗುತ್ತಿರುವ ಉಪಕಾರಗಳನ್ನು ಈ ಜನ ಗಣನೆಗೆ ತೆಗೆದುಕೊಳ್ಳುವುದಿಲ್ಲ.

ಆದರೂ ಅಮಾನುಷ ಕೃತ್ಯಗಳನ್ನು ಮೆಟ್ಟಿನಿಂತು ನಮ್ಮ ಕರ್ತವ್ಯದಲ್ಲಿ ಸ್ವಲ್ಪವೂ ಹಿಂಜರಿಯ ಬಾರದು. ಇಂತಹ ವಿಚಾರಗಳಲ್ಲಿ ಯಾವುದೇ ರಾಜಿಸೂತ್ರವೂ ಸಲ್ಲ. ಆಗ ಮಾತ್ರ ಇಂಥ ಮುಖಂಡರು, ರಾಜಕಾರಣಿಗಳು ಪತ್ರಿಕೆಗಳ ಮಾತಿಗೆ ಕಿವಿಗೊಡುತ್ತಾರೆ.

ನಿಮ್ಮ ಪತ್ರಿಕೆಯ ಲೇಖನ ಹಾಗೂ ಸುದ್ದಿಗಳು ಅತ್ಯಂತ ಸಭ್ಯ ರೀತಿಯಲ್ಲಿದ್ದರೂ, ನೀವು ಪತ್ರಿಕಾಧರ್ಮವನ್ನು ಯೋಗ್ಯರೀತಿಯಲ್ಲಿ ಪಾಲಿಸುತ್ತಿದ್ದರೂ ಕೆಲವೇ ಮಂದಿಯ ಈ ಧೂರ್ತತನ ಖೇದಕರ ಎಂದು ಮತ್ತೊಮ್ಮೆ ಹೇಳುತ್ತೇನೆ.

—ಬಿ.ಎಸ್. ವಿದ್ಯಾನಂದ ಭಟ್
'ಹೊಸ ದಿಗಂತ' ದಿನಪತ್ರಿಕೆಯ ಜಿಲ್ಲಾ ಪ್ರತಿನಿಧಿ, ಬಾಳೆಹೊನ್ನೂರು

### ಪದ್ಯದಂಕಣ

**ಸಿಹಿ—ಕಹಿ**

ಚುನಾವಣೆಯ ಮುನ್ನ
ಉದ್ದ ಭಾಷಣಗಳನ್ನು ಕೇಳುತ್ತಿದ್ದ
ಮತದಾರ
ಬಾಯಿಗೆ ಸಕ್ಕರೆಯೇ
ಬಿತ್ತೆಂದು ತಿಳಿದು ಬಾಯಿ
ಚಪ್ಪರಿಸಿದ.
ಚುನಾವಣೆಯ ನಂತರದ
ದಿನಗಳಲ್ಲಿ
ಬಾಯಿಗೆ ಬಿದ್ದಿದ್ದು ಸಕ್ಕರೆಯಲ್ಲ,
ಮನಸ್ಸಿಗೆ ಹಾಕಿದ ಬೂದಿಯ
ಪ್ರಭಾವ ಎಂದು ತಿಳಿದಾಗ
ಚಪ್ಪರಿಸಿದಬಾಯಿ ಕಹಿಯಾಯ್ತು.

—ಸುಧೀರ್ ಅನಂದೂರು

### ಧನ್ಯವಾದ

ಈ ವಿಚಾರದ ಸಂವಾದವನ್ನು ಇಲ್ಲಿಗೆ ಮುಕ್ತಾಯಗೊಳಿಸುತ್ತೇನೆ. ನೈತಿಕತೆಯ ನಮ್ಮ ನಿಲುವಿಗೆ ಸವಾಲೊಡ್ಡಿದ ಈ ಸಂದರ್ಭದಲ್ಲಿ ನಮ್ಮ ಪತ್ರಿಕೆಯ ಹಾಗೂ ಇಡೀ ನ್ಯಾಯನಿಷ್ಠ ಪತ್ರಿಕೋದ್ಯಮದ ಬಗ್ಗೆ ತಮ್ಮ ಆಲೋಚನೆಗಳನ್ನು ತೆರೆದಿಟ್ಟ ಅಂಥ ಪತ್ರಿಕೆಗಳಿಗೆ ಮತ್ತು ಪತ್ರಕರ್ತರಿಗೆ, ತಮ್ಮೆಲ್ಲ ನೈತಿಕಬೆಂಬಲ, ಸಹಾನುಭೂತಿ ವ್ಯಕ್ತಪಡಿಸಿದ ಈ ಎಲ್ಲಾ ಅಭಿಪ್ರಾಯವಂತರಿಗೆ ಧನ್ಯವಾದಗಳು.

ಹಾಗೆಯೇ ಪ್ರತ್ಯಕ್ಷವಾಗಿ–ಪರೋಕ್ಷವಾಗಿ ಹಲ್ಲೆಯ ಬಗ್ಗೆ ವಿಚಾರಿಸಿ ನಮಗೂ, ನಮ್ಮ ಪತ್ರಿಕೆಗೂ ಬೆಂಬಲದ ಭರವಸೆ ತುಂಬಿದ ಎಲ್ಲ ಹಿತೈಷಿಗಳಿಗೂ ಕೃತಜ್ಞತೆಗಳು.

ಈ ಹಲ್ಲೆಯಾಗಲಿ, ಹೀಗೆ ಹಲ್ಲೆ ನಡೆಸುವುದಾಗಲಿ ಸರಿಯಾದುದೆಂದು, ಅಥವಾ ಈ ಹಲ್ಲೆಗೆ ನಮ್ಮ ತಪ್ಪೇ ಕಾರಣ ಎಂದು ತಿಳಿದಿರುವವರು ಸಹ ತಮ್ಮ ಅಭಿಪ್ರಾಯ ಸಮರ್ಥಿಸಿ ಕೊಳ್ಳಲೆಂದು ನಾವು 'ವೇದಿಕೆ'ಯ ಮೂಲಕ ಕೊಟ್ಟ ಅವಕಾಶವನ್ನು ಉಪಯೋಗಿಸಿಕೊಳ್ಳಲು ಯಾರೂ ಮುಂದೆ ಬರದಿದ್ದುದು ವಿಸ್ಮಯಕರ, ವಿಷಾದನೀಯ.

12.3.86 —ಸಂಪಾದಕ.

### 'ಮುಂಜಾವು' ಪತ್ರಿಕೆಯ ಮಾಲೀಕತ್ವ ಮತ್ತಿತರ ವಿವರ

ಫಾರಂ ನಂ. IV (ರೂಲ್ 8 ನೋಡಿ)

| | | |
|---|---|---|
| 1. | ಪ್ರಕಟಣೆಯ ಸ್ಥಳ | ಕೊಪ್ಪ, ಚಿಕ್ಕಮಗಳೂರು ಜಿಲ್ಲೆ. |
| 2. | ಪ್ರಕಟಣೆಯ ಅವಧಿ | ವಾರಕ್ಕೊಮ್ಮೆ |
| 3. | ಭಾಷೆ | ಕನ್ನಡ |
| 4. | ಸಂಪಾದಕ, ಮುದ್ರಕ ಮತ್ತು ಪ್ರಕಾಶಕರ ಹೆಸರು, ರಾಷ್ಟ್ರ, ವಿಳಾಸ | ಸಿರಿಮನೆ ನಾಗರಾಜ್ ಭಾರತೀಯ 129/1, ವೀರಭದ್ರಸ್ವಾಮಿ ರಸ್ತೆ, ಕೊಪ್ಪ, ಚಿಕ್ಕಮಗಳೂರು ಜಿಲ್ಲೆ, ಕರ್ನಾಟಕ. |
| 5. | ಪತ್ರಿಕೆಯ ಮಾಲಿಕತ್ವ ಅಥವಾ ಪಾಲುದಾರಿಕೆ | ಪೂರ್ಣಮಾಲೀಕತ್ವ: ಸಿರಿಮನೆ ನಾಗರಾಜ್. |

ಮೇಲೆ ಕಾಣಿಸಿರುವ ವಿವರಗಳು ನನ್ನ ಗ್ರಹಿಕೆ ಮತ್ತು ವಿಶ್ವಾಸದ ಪ್ರಕಾರ ಸರಿಯಾಗಿವೆಯೆಂದು ಈ ಮೂಲಕ ಹೇಳುತ್ತಿದ್ದೇನೆ.

16–3–86. (ಸಹಿ) ಸಿರಿಮನೆ ನಾಗರಾಜ್
(ಪ್ರಕಾಶಕರ ಸಹಿ)

## ಹಳ್ಳಿಗಾಡಿನ ಎಳೆಯರ ಮೆಚ್ಚಿನ ಆಟವಾದ
# ಚಿನ್ನಿ-ದಾಂಡಿಗೆ ನವಚೇತನದ ಯತ್ನ

ನಮ್ಮ ಹಳ್ಳಿಗಾಡಿನಲ್ಲಿ ವಿಶಿಷ್ಟವಾದ ಎಷ್ಟೋ ಬಗೆಯ ಆಟಗಳಿವೆ, ಮನರಂಜನೆಯ ಮಾಧ್ಯಮಗಳಿವೆ. ಅವು ದೊಡ್ಡವರದಾಗಿರ ಬಹುದು ಅಥವಾ ಮಕ್ಕಳದಾಗಿರಬಹುದು. ಆದರೆ ಅವುಗಳ ವಿಶಿಷ್ಟತೆ ಮತ್ತು ಸವಿ ಅನುಭವಿಸಬಲ್ಲವರಿಗೆ ಮಾತ್ರ ಗೊತ್ತು. ಮೇಲಾಗಿ, ದೊಡ್ಡವರ ಇಂಥ ಕಾರ್ಯಕ್ರಮಗಳು ಮಕ್ಕಳನ್ನೂ ಮಕ್ಕಳ ಇಂಥ ಕಾರ್ಯಕ್ರಮಗಳು ದೊಡ್ಡವರನ್ನೂ ಸಹಜವಾಗಿಯೇ ಆಕರ್ಷಿಸುತ್ತವೆ.

ಇಂಥ ಒಂದು ಕ್ರೀಡೆಯಾದ ಕೆಸರುಗದ್ದೆ ಓಟದ ಬಗ್ಗೆ ನಮ್ಮ 2-3-86ರ ಸಂಚಿಕೆಯಲ್ಲಿ ಓದಿದ್ದೀರಿ. ಹಳ್ಳಿಗಾಡಿನ, ಮುಖ್ಯವಾಗಿ ಮಕ್ಕಳ ಆಟವಾದ 'ಚಿನ್ನಿ-ದಾಂಡು' ಆಟಕ್ಕೆ ಇಂಥದೇ ವಿಶಿಷ್ಟತೆಯನ್ನು, ನವಚೇತನವನ್ನು ತಂದುಕೊಡುವ ಯತ್ನವೊಂದು ನಡೆದಿದೆಯೆಂದರೆ ಆಶ್ಚರ್ಯವಾಗಬಹುದು.

ಶಿವಮೊಗ್ಗದ 'ಕಲಾ ಕಿರಣ' ಸಂಸ್ಥೆ ಹಲವು ಬಗೆಯ ಸಾಂಸ್ಕೃತಿಕ ಚಟುವಟಿಕೆಗಳನ್ನು ನಡೆಸಲು ಉದ್ದೇಶಿಸಿರುವ, ಅಂಥ ಹಲವನ್ನು ಈಗಾಗಲೇ ಹಮ್ಮಿಕೊಂಡಿರುವ ಒಂದು ಹವ್ಯಾಸಿ ಸಂಸ್ಥೆ. ಇವರು ಈಚೆಗೆ ಶಿವಮೊಗ್ಗ ಜಿಲ್ಲಾ ಮಟ್ಟದ ಚಿನ್ನಿ-ದಾಂಡು ಸ್ಪರ್ಧೆ ನಡೆಸಿದರು.

ಕ್ರಿಕೆಟ್, ಫುಟ್‌ಬಾಲ್ ಮುಂತಾದ ಆಟಗಳಂತೆಯೇ ಚಿನ್ನಿ-ದಾಂಡನ್ನು ಸಹ ಕ್ರಮಬದ್ಧವಾಗಿ ಆಡಲು ಸಾಧ್ಯವಾಗುವಂತೆ ವ್ಯವಸ್ಥಿತ ವಿಧಿ-ವಿಧಾನಗಳನ್ನು ನಿರೂಪಿಸಲು ಅವರು ಈ ಕೂಟದ ಮೂಲಕ ಯತ್ನಿಸಿದರು. ಸ್ಪರ್ಧೆಗೆ ಜಿಲ್ಲೆಯಾದ್ಯಂತ 16 ತಂಡಗಳು ಭಾಗವಹಿಸಿದ್ದಲ್ಲದೆ ಸಾಕಷ್ಟು ಸಂಖ್ಯೆಯಲ್ಲಿ ಜನರೂ ಆಕರ್ಷಿಸಲ್ಪಟ್ಟರು.

ಬಂಡಲ್ ಬಿಡುವ ಸ್ಪರ್ಧೆ, ಗಾನ-ಅನುಮಾನ, ನಗಿಸಿ ಯಾ ನಿರ್ಗಮಿಸಿ, ಶಾಯರಿ ಮುಂತಾದ ವಿಶಿಷ್ಟ ಹಾಗೂ ವಿಲಕ್ಷಣವಾದ ಸ್ಪರ್ಧೆಗಳನ್ನು ಈ ಹಿಂದೆ ನಡೆಸಿದ್ದ 'ಕಲಾ ಕಿರಣ'ದವರ ಮೇಲ್ಪಂಕ್ತಿಯನ್ನನುಸರಿಸಿ ಚಿನ್ನಿ-ದಾಂಡಿಗೆ ಇನ್ನೂ ಹೆಚ್ಚಿನ ಮಾನ್ಯತೆ ಮತ್ತು ಆಕರ್ಷಣೆಯನ್ನು ತಂದು ಕೊಡಲು ಯಾರಾದರೂ ಮುಂದಾಗುವರೆ?-ಕಾದು ನೋಡಬೇಕು.

## "ಹ್ಯಾಲಿ" ಧೂಮಕೇತು ಈಗ ಬರಿಗಣ್ಣಿಗೆ ಗೋಚರಿಸುತ್ತಿದೆ!

76 ವರ್ಷಗಳಿಗೊಮ್ಮೆ ಭೂಮಿಯ ಸಮೀಪಕ್ಕೆ ಬಂದು ಗೋಚರಿಸುವ "ಹ್ಯಾಲಿ" ಧೂಮಕೇತುವಿನ ದರ್ಶನಕ್ಕಾಗಿ ಅನೇಕರು ಹಂಬಲಿಸುತ್ತಿರಬಹುದು. ಈಗ ಹ್ಯಾಲೀ ಧೂಮಕೇತು ಬರಿಗಣ್ಣಿಗೇ ಗೋಚರಿಸುತ್ತಿದೆ. ಬೆಳಗಿನ ಜಾವ 5ಘಂಟೆಯಿಂದ 5-45ರ ವರೆಗೆ ಪೂರ್ವ ದಿಗಂತದ ದಕ್ಷಿಣ ಭಾಗದಲ್ಲಿ ಈ ಧೂಮಕೇತುವನ್ನು ಗುರುತಿಸಬಹುದಾಗಿದೆ. ದೂರದರ್ಶಕಗಳಿಂದ ಉತ್ತಮ ಹಾಗೂ ಸ್ಪಷ್ಟ ಚಿತ್ರಣ ಗೋಚರಿಸುತ್ತದಾದರೂ, ಬರಿಗಣ್ಣಿಗೂ ಕೂಡಾ ನೋಡಲು ಸಾಧ್ಯವಿದೆ. ನಕ್ಷತ್ರದಂತಹ ತಲೆ ಹಾಗೂ ಮಸುಕು-ಮಸುಕಾದ ಬಾಲವನ್ನು ಗುರುತಿಸಬಹುದು. ನಿರ್ಮಲ ಆಕಾಶವಿದ್ದು, ಮಂಜು ಕವಿಯದೇ ಇರುವ ಮುಂಜಾನೆ ನೋಡಲು ಅನುಕೂಲ.

**ನವಿಲೂರ್ ಪ್ರಕಾಶ್,** ಎಂ.ಎಸ್ಸಿ.

## ಪೊಲೀಸರಿಂದ ನಾಗರಿಕರಿಗೆ ಬಂದೂಕು ತರಬೇತಿ

ಪೊಲೀಸ್ ಇಲಾಖೆಯು ಸಾರ್ವಜನಿಕರಿಗೆ ಬಂದೂಕು ತರಬೇತಿ ನೀಡಲು ಉದ್ದೇಶಿಸಿದ್ದು, ಇದಕ್ಕಾಗಿ ಪ್ರತ್ಯೇಕ ಕಚೇರಿಯೊಂದನ್ನು ತೆರೆಯಲಾಗಿದೆ. ಆಸಕ್ತರು ಅರ್ಜಿ ಫಾರಂ ಅನ್ನು ನಿರೀಕ್ಷಕರು, ಜಿಲ್ಲಾ ಸಶಸ್ತ್ರ ಮೀಸಲು ಪಡೆ, ರಾಮನಹಳ್ಳಿ, ಚಿಕ್ಕಮಗಳೂರು, ಇವರಿಂದ ಪಡೆದು ಅರ್ಜಿ ಸಲ್ಲಿಸಬಹುದು. ತರಬೇತಿಯ ಸ್ಥಳ ಚಿಕ್ಕಮಗಳೂರು. ಅವಧಿ ಒಂದುವಾರ. ಹೆಚ್ಚಿನ ವಿವರಗಳನ್ನು ಮೇಲ್ಕಂಡ ವಿಳಾಸದಿಂದ ಅಥವಾ ಜಿಲ್ಲಾ ಪೊಲೀಸ್ ಮುಖ್ಯಾಧಿಕಾರಿಗಳಿಂದ ಪಡೆಯಬಹುದು.

## ಕುಟುಂಬ ಯೋಜನೆ: ಜಿಲ್ಲೆಯಲ್ಲಿ ಗುರಿಮೀರಿ ಸಾಧನೆ

ಚಿಕ್ಕಮಗಳೂರು: 1985-86ನೇ ಸಾಲಿಗೆ ಜಿಲ್ಲೆಯಲ್ಲಿ ಕುಟುಂಬ ಯೋಜನೆಯ ಅಂಗವಾಗಿ 8250 ಸಂತಾನ ಹರಣ ಶಸ್ತ್ರ ಚಿಕಿತ್ಸೆಯ ಗುರಿ ಹೊಂದಲಾಗಿದ್ದು, ಈಗಾಗಲೇ ಇದನ್ನು ಮೀರಲಾಗಿದೆ. ಫೆಬ್ರವರಿ ಮಾಸಾಂತ್ಯದೊಳಗೆ 8840 ಶಸ್ತ್ರ ಚಿಕಿತ್ಸೆಗಳು ನಡೆದಿದ್ದು ಮಾರ್ಚ್ ಅಂತ್ಯದೊಳಗೆ ಇನ್ನೂ ಸುಮಾರು 1800 ಶಸ್ತ್ರ ಚಿಕಿತ್ಸೆಗಳ ಗುರಿಯನ್ನು ಪೂರೈಸುವಂತೆ ಈಚೆಗೆ ನಡೆದ ಕುಟುಂಬ ಕಲ್ಯಾಣ ಯೋಜನೆ ಪ್ರಗತಿ ಪರಿಶೀಲನೆ ಸಭೆಯಲ್ಲಿ ಜಿಲ್ಲಾಧಿಕಾರಿಗಳು ತಹಸೀಲ್ದಾರರುಗಳಿಗೆ ಸೂಚಿಸಿದರು.

ಈ ಪೈಕಿ ಕೊಪ್ಪಕ್ಕೆ 200, ನ. ರಾ. ಪುರಕ್ಕೆ 100 ಮತ್ತು ಶೃಂಗೇರಿ ತಾ॥ಗೆ 50ರ ಗುರಿಯನ್ನು ನಿಗದಿಮಾಡಲಾಗಿದೆ.

ಇದೇ ಅವಧಿಯಲ್ಲಿ 1123 ಜನ ಕ್ಷಯ ರೋಗಿಗಳನ್ನು ಗುಣಪಡಿಸಿದ್ದು, 992 ಜನರಿಗೆ ಅಂಧತ್ವ ನಿವಾರಣೆ ಮಾಡಲಾಗಿದೆ.

## ಕವಿ ಹೃದಯದ ಮೊಹಮದ್ ಇಸ್ಮಾಯಿಲ್

—ಒಂದು ಕಂಬನಿ

ಶಾಲಾ ದಿನಗಳಲ್ಲಿ ಒಳ್ಳೆಯ ಉದಯೋನ್ಮುಖ ಬರಹಗಾರನಾಗಿದ್ದು ಮುಂದೊಂದು ದಿನ ಸಾಹಿತಿಯೋ ಉತ್ತಮ ಮಾಸ್ತರನೋ ಆಗುವ ಎಲ್ಲ ಲಕ್ಷಣ ಹೊಂದಿದ್ದ ಕಾಳನಾಯಕನಕಟ್ಟೆ ಜಲೀಲ್ ಸಾಹೇಬ್ ಮೊಹಮದ್ ಇಸ್ಮಾಯಿಲ್ ಶಿಕ್ಷಣ ಇಲಾಖೆಯಲ್ಲಿ ಕೇವಲ ಎರಡನೇ ದರ್ಜೆ ಗುಮಾಸ್ತನಾಗಿದ್ದು ಒಂದು ವಿಪರ್ಯಾಸವೇ ಆಗಿತ್ತು. ಆ ನಂತರವಾದರೂ ಬೇಕಾಗಿಯೋ ಬೇಡವಾಗಿಯೋ "ಮನೋರೋಗಿ"ಯಾದ ಈತನ ಬಗ್ಗೆ ಅನುಕಂಪ ತೋರುತ್ತಿದ್ದ ಕೆಲವೇ ಜನ ಅಧ್ಯಾಪಕರು, ಖಾಜಿಗಳು, ಸ್ನೇಹಿತರು, ತಾಯಿ, ಸಹೋದರರು-ಸಹೋದರಿ, ಪತ್ರಕರ್ತರು ಮತ್ತಿತರ ಹಿತೈಷಿಗಳೆಲ್ಲರ ಕಣ್ಣು ತಪ್ಪಿಸಿ ಅಕಾಲ ಮೃತ್ಯುವಿಗೆ ತನ್ನನ್ನು ಒಪ್ಪಿಸಿಕೊಂಡುದು ವಿಧಿಯ ಕೈವಾಡವೆನ್ನೋಣವೇ?

**—ಕೆ.ಜಿ.ಎಫ್. ಶಾಸ್ತ್ರಿ,** ಹರಿಹರಪುರ.

## ಹಂಚು-ನಾಟ ಮಂಜೂರಾತಿಯಲ್ಲಿ ವಿಳಂಬ:
# ಜನತಾ ಮನೆ ಪ್ರಯೋಜನದಾರರ ಆತಂಕ

ಕೊಪ್ಪ: ಈ ತಾ॥ ನಲ್ಲಿ ಕೆಲವೆಡೆ ಜನತಾ ಮನೆಗೆ ಹಂಚು-ನಾಟ ಸರಬರಾಜಿನಲ್ಲಿ ವಿಳಂಬವಾಗಿದ್ದು, ಮಳೆಗಾಲಕ್ಕೆ ಇನ್ನ ಎರಡೇ ತಿಂಗಳು ಉಳಿದಿರುವಾಗ ತಾವಿನ್ನು ಮನೆ ಕಟ್ಟಿಕೊಳ್ಳುವುದು ಯಾವಾಗ ಎಂದು ವಸತಿ ವಿಹೀನರು ಚಿಂತಿಸುವಂತಾಗಿದೆ.

**ಸಣ್ಣಕೌಳಿಯಲ್ಲಿ**

ಜಯಪುರ-ಬಸರೀಕಟ್ಟೆ ಮಾರ್ಗದಲ್ಲಿರುವ ಸಣ್ಣಕೌಳಿಯ ಹರಿಜನರು ಬಹಳ ಹೋರಾಡಿದ ನಂತರ ಅಲ್ಲಿನ ಸುಮಾರು21 ಜನರಿಗೆ 30'-40' ವಿಸ್ತೀರ್ಣದ ಒಂದೊಂದು ಜನತಾ ನಿವೇಶನ 1984ರ ಮೇ ತಿಂಗಳಲ್ಲೇ ಮಂಜೂರಾಗಿದೆ. ಅದರಲ್ಲಿ 11 ಜನರಿಗೆ ಉಚಿತವಾಗಿ ಸಿಕ್ಕಿದ್ದರೆ ಉಳಿದವರು 14-75 ರೂ. ಕಟ್ಟಿದ್ದಾರೆ.

ಈ ಪೈಕಿ 10 ಜನರಿಗೆ ಈ ವರ್ಷ ಜನತಾ ಮನೆ ಮಂಜೂರಾಗಿರುವುದಾಗಿ ಕೊಪ್ಪದ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳು ತಿಳಿಸಿ, ಮನೆಗಳಿಗಾಗಿ ಪಂಚಾಯಿತಿ ಲೈಸೆನ್ಸ್ ಮಾಡಿಸಲು ಹೇಳಿದ್ದು ಅದರಂತೆ ಅವರೆಲ್ಲ ಲೈಸೆನ್ಸ್ ಮಾಡಿಸಿದ್ದಾರೆ. ಅವರಿಂದ ಹಂಚು-ನಾಟಕ್ಕಾಗಿ ಅರ್ಜಿಯನ್ನು ಸಹ ಬಿಡಿಒ ಕಚೇರಿಯವರು ಪಡೆದಿದ್ದಾರೆ.

ಆದರೆ ಈಗ ಇವರುಗಳು ಹಂಚು-ನಾಟ ಯಾವಾಗ ಸಿಗುತ್ತೆಂದು ಕೇಳಿದರೆ ಬಿಡಿಒ ಕಚೇರಿಯವರು ಹೇಳುವ ಸ್ಥಿತಿಯಲ್ಲಿಲ್ಲ. ಹೋಗಲಿ, ನಾವು ಮನೆ ಕಟ್ಟಲಿಕ್ಕಾದರೂ ಶುರು ಮಾಡುತ್ತೇವೆ. ಹಂಚುನಾಟ ಬಂದಾಗ ಕೊಡಿ ಎಂದರೆ ಅದಕ್ಕೂ ಈಗಲೇ ಬೇಡ ಎನ್ನುತ್ತಿದ್ದಾರಂತೆ

ಮೇ ಕೊನೆಯೊಳಗಾಗಿ ಮನೆ ಮುಗಿಸಿಕೊಳ್ಳದಿದ್ದರೆ ಕಟ್ಟಿದಷ್ಟು ಸಹ ಮಳೆಗಾಲದಲ್ಲಿ ಉಳಿಯುವುದಿಲ್ಲ. ಇನ್ನು ಯಾವಾಗ ನಾವು ಮನೆ ಕಟ್ಟಿಕೊಳ್ಳುವುದು ಎಂಬುದೇ ಈ ದಲಿತರ ಆತಂಕವಾಗಿದೆ.

## ಲೋಕೋಪಯೋಗಿ ಇಲಾಖೆ ಗ್ಯಾಂಗ್‌ಮನ್‌ಗಳ ಧರಣಿ

ಕೊಪ್ಪ: ಇಲ್ಲಿನ ಲೋಕೋಪಯೋಗಿ ಇಲಾಖೆ ಗ್ಯಾಂಗ್‌ಮನ್‌ಗಳು ಮಾ. 10 ರಂದು ಸಹಾಯಕ ಕಾರ್ಯ ನಿರ್ವಾಹಕ ಇಂಜಿನಿಯರ್ ಕಚೇರಿಯೆದುರು ಧರಣಿ ನಡೆಸಿ, ನಂತರ ತಮ್ಮ ಬೇಡಿಕೆಗಳ ಬಗ್ಗೆ ಮನವಿ ಪತ್ರವೊಂದನ್ನು ಸಲ್ಲಿಸಿದರು.

ಮರುದಿನ ಸದರಿ ಅಧಿಕಾರಿಯೊಂದಿಗೆ ಚರ್ಚಿಸಿದಾಗ, 1) ಪ್ರತಿ ತಿಂಗಳ 5ನೇ ತಾರೀಖಿನೊಳಗೆ ಸಂಬಳ ನೀಡಲು ಒಪ್ಪಿದರು; 2) ಸಮವಸ್ತ್ರಕ್ಕೆ ಬೇಕಾದ ಗ್ರಾಂಟ್ ನೀಡಲು ಸರ್ಕಾರಕ್ಕೆ ಬರೆಯಲಾಯಿತು; 3) ರಜೆ ಸೌಲಭ್ಯ ಕೆಲವರಿಗೆ ಕೊಡಲಾಗಿದ್ದು ಕೊಡದಿರುವವರಿಗೆ ಮುಂದೆ ಕೊಡಲು ಒಪ್ಪಿದರು; (4) ಸೇವಾ ರಿಜಿಸ್ಟರ್‌ಗಳು ಸರ್ಕಾ

(4ನೇ ಪುಟಕ್ಕೆ)

## 'ಮುಂಜಾವು' ಸಂಪಾದಕರ ಮೇಲಿನ ಹಲ್ಲೆಗೆ ಶೃಂಗೇರಿ ನಾಯಕರ, ವಿದ್ಯಾರ್ಥಿಗಳ ಖಂಡನೆ

(ವರದಿ: ಕಲ್ಕುಳಿ ವಿಠಲ ಹೆಗ್ಡೆ)

ಶೃಂಗೇರಿ: ಕಳೆದ ತಿಂಗಳು 20 ರಂದು ಕೊಪ್ಪದಲ್ಲಿ ನಡೆದ ಆಟೋ ಚಾಲಕರ ಮುಷ್ಕರದ ವೇಳೆ 'ಮುಂಜಾವು' ಸಂಪಾದಕರ ಮೇಲೆ ಎಸಗಿದ ಹಲ್ಲೆಯನ್ನು ಖಂಡಿಸಿ ಇಲ್ಲಿನ ಹಲವು ರಾಜಕೀಯ ಮುಖಂಡರು, ಪ್ರಗತಿಪರ ವಿದ್ಯಾರ್ಥಿಗಳು ಹೇಳಿಕೆ ನೀಡಿದ್ದಾರೆ.

ಜಾತ್ಯತೀತ, ಸರ್ವ ಸಮಾನತೆಯ ಮನೋಭಾವದೊಂದಿಗೆ, ಎಲ್ಲ ದುಡಿಯುವವರ, ಶೋಷಿತರ, ದಲಿತರ ಧ್ವನಿಯಾಗಿ ಮಾನವೀಯ ಮೌಲ್ಯಗಳ ಮೇಲ್ಪಂಕ್ತಿಯನ್ನು ಅನುಸರಿಸುತ್ತಿರುವ 'ಮುಂಜಾವು'ನಂಥ ಪತ್ರಿಕೆಯೊಂದರ ಸಂಪಾದಕರ ಮೇಲೆ ಕೈ ಮಾಡಿರುವುದು ಬಹಳ ವಿಷಾದನೀಯ ಎಂದು ಅವರುಗಳು ಹೇಳಿದ್ದಾರೆ.

### ತಿದ್ದುಪಡಿ

ಕೃಷಿ ಸಹಾಯಕರ ಹುದ್ದೆಗೆ ಅರ್ಜಿ ಕರೆದಿರುವ ಕುರಿತು ದಿನಾಂಕ: 9.3.86ರ ನಮ್ಮ ಪತ್ರಿಕೆಯಲ್ಲಿನ ಪ್ರಕಟಣೆಯಲ್ಲಿ ಈ ಕೆಳಕಂಡ ದಿನಾಂಕಗಳು ತಪ್ಪಾಗಿವೆ.

| | ತಪ್ಪು | ತಿದ್ದುಪಡಿ |
|---|---|---|
| **1. ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ:** | 30.3.86. | **20.3.86** |
| 2. ಇಲಾಖಾ ನೇಮಕಾತಿ ಸಮಿತಿಯ ಅಂಗ್ಲ ಜಾಹೀರಾತು ನೀಡಿರುವ ದಿನಾಂಕ: | 3.3.86 | 3.2.86 |
| 3. ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡಿರುವ ದಿನಾಂಕ: | 18.3.86. | 13.2.86 |

ಜಿಲ್ಲಾ ಕೃಷಿ ಇಲಾಖೆಯವರು ಕಳಿಸಿದ ಪ್ರಕಟಣೆಯಲ್ಲಿ ಈ ದಿನಾಂಕಗಳು ಓದಲು ಸಾಧ್ಯವಾಗದಂತಿದ್ದ ಕಾರಣ ಉಂಟಾದ ಈ ತಪ್ಪಿಗಾಗಿ ವಿಷಾದಿಸುತ್ತೇವೆ. —ಸಂ

## ಕೊಪ್ಪದ ಪ್ರ. ದ. ಕಾಲೇಜಿನ ವಾರ್ಷಿಕೋತ್ಸವದಂದು
# ದಾನಿಗಳಿಗೆ ಸಾಂಕೇತಿಕ ಸನ್ಮಾನ

ಕೊಪ್ಪ: ಮಾ. 12ರಂದು ನಡೆದ ಇಲ್ಲಿನ ಪ್ರ. ದ. ಕಾಲೇಜಿನ ವಾರ್ಷಿಕೋತ್ಸವ ಸಮಾರಂಭದ ಸಂದರ್ಭದಲ್ಲಿ, ಕಾಲೇಜಿಗೆ ಈವರೆಗೆ ಹೆಚ್ಚಿನ ದೇಣಿಗೆ/ನೆರವು ನೀಡಿದ ಮ್ಯಾಮ್ಕೋಸ್, ಕರಿಮನೆ ಭೂ ಅಭಿವೃದ್ಧಿ ಬ್ಯಾಂಕ್ ಮತ್ತು ಕೊಪ್ಪ ಲಯನ್ಸ್ ಕ್ಲಬ್–ಈ ಸಂಸ್ಥೆಗಳನ್ನು ಸ್ಮರಿಸಲಾಯಿತಲ್ಲದೆ, ಲಯನ್ಸ್ ಅಧ್ಯಕ್ಷ ಪ್ರಭಾಕರ ಕಲ್ಲೆ ಮತ್ತು ಕರಿಮನೆ ಬ್ಯಾಂಕ್ ಅಧ್ಯಕ್ಷ ಡಾ|| ಯು. ಎಸ್. ಯೋಗಪ್ಪ ಇವರುಗಳನ್ನು ಸಾಂಕೇತಿಕವಾಗಿ . ಸನ್ಮಾನಿಸಲಾಯಿತು.

ಸಮಾರಂಭದ ಅಧ್ಯಕ್ಷತೆಯನ್ನು ಕಾಲೇಜು ಸಮಿತಿ ಅಧ್ಯಕ್ಷ ಎಂ. ಡಿ. ಬಾಲಕೃಷ್ಣ ವಹಿಸಿದ್ದರು. ಶೃಂಗೇರಿ ಕಾಲೇಜಿನ ಕೆ. ಪುಟ್ಟಯ್ಯ ಮುಖ್ಯ ಭಾಷಣಕಾರರಾಗಿದ್ದರು. ಕಾಲೇಜು ಸಮಿತಿ ಕಾರ್ಯದರ್ಶಿ ಬಿ. ಜಿ. ಚಿದಂಬರ್ ಮಾತನಾಡಿ, ಕಾಲೇಜಿಗೆ ಉದಾರವಾಗಿ ದೇಣಿಗೆ ನೀಡಿದವರನ್ನು ಸ್ಮರಿಸಿ ಕಾಲೇಜಿನಲ್ಲಿ ವಿಜ್ಞಾನ ವಿಭಾಗ ಆರಂಭಿಸಲು ಕಟ್ಟಡದ ವಿಸ್ತರಣೆ ಆಗಬೇಕಾಗಿದ್ದು ಇದಕ್ಕಾಗಿ, ಇನ್ನೂ ಹೆಚ್ಚಾಗಿ ದಾನಿಗಳು ಮುಂದೆ ಬರಬೇಕೆಂದರು.

ಪ್ರಾಸ್ತಾವಿಕ ಭಾಷಣ ಮಾಡಿದ ಪ್ರಿನ್ಸಿಪಾಲ್ ಕೆ. ವಿ. ಲಿಂಗಪ್ಪನವರು ಕಾಲೇಜಿನ ಪ್ರಗತಿಯನ್ನು ವಿವರಿಸಿ, ಹಾಸ್ಟೆಲು, ಸಿಬ್ಬಂದಿಯ ವಸತಿಗೃಹ ಮುಂತಾದುವುಗಳಿಗಾಗಿ ಭೂಮಿ ಮಂಜೂರು ಮಾಡಿದ ಬಗ್ಗೆ ಜಿಲ್ಲಾಧಿಕಾರಿಗಳಿಗೂ ತಹಸೀಲ್ದಾರರಿಗೂ ಕೃತಜ್ಞತೆ ಸಲ್ಲಿಸಿದರು. ತಹಸೀಲ್ದಾರ್ ಎಸ್. ಕರಿಗೌಡ ಇನ್ನೊಬ್ಬ ಮುಖ್ಯ ಅತಿಥಿಯಾಗಿದ್ದರು.

ಕನ್ನಡ ಉಪನ್ಯಾಸಕ ಕೆ. ಸಿ. ವೆಂಕಟೇಶ್ ಕಾರ್ಯಕ್ರಮ ನಿರೂಪಿಸಿದರು. ಎನ್. ಎಸ್. ಎಸ್. ಅಧಿಕಾರಿ ಮರಂಕಯ್ಯ ಎನ್ನೆಸ್ಸೆಸ್‌ನ ವರದಿ ಮಂಡಿಸಿದರು

ಕಾಲೇಜು ವಿದ್ಯಾರ್ಥಿ–ವಿದ್ಯಾರ್ಥಿನಿಯರಿಂದ ನಾಟಕ ಮತ್ತು ಇತರ ಮನರಂಜನಾ ಕಾರ್ಯಕ್ರಮಗಳು ನಡೆದವು. ವಿದ್ಯಾರ್ಥಿಗಳಾದ ನಾಗಪ್ಪಗೌಡ ಸ್ವಾಗತಿಸಿ, ಎಂ. ಸಿ. ಅಶೋಕ್ ವಂದಿಸಿದರು.

### ಉಚಿತ ನೇತ್ರ ಪರೀಕ್ಷಾ ಶಿಬಿರ

ಬಾಳೆಹೊಳೆ: ಕುದುರೆಮುಖ ಲಯನ್ ಕ್ಲಬ್ ಆಶ್ರಯದಲ್ಲಿ ಮಣಿಪಾಲದ ತಜ್ಞ ವೈದ್ಯರಿಂದ ಉಚಿತ ಕಣ್ಣು ಪರೀಕ್ಷೆ ಶಿಬಿರ ಇಲ್ಲಿ ಮಾ. 8ರಂದು ನಡೆಯಿತು. ಸೌಲಭ್ಯ ವಂಚಿತವಾದ ಈ ಸುತ್ತ ಮುತ್ತಲಿನ ಹತ್ತಾರು ಹಳ್ಳಿಗಳ ಜನ ಇದರಿಂದ ಹೆಚ್ಚಿನ ಪ್ರಯೋಜನ ಪಡೆದರು.

ಲಯನ್ಸ್ ಅಧ್ಯಕ್ಷ ತ್ಯಾಗರಾಜನ್ ಮತ್ತು ಮೈನಿಂಗ್ ಸೂಪರಿಂಟೆಂಡೆಂಟ್ ಕುಲಕರ್ಣಿ ಶಿಬಿರದ ಮಾರ್ಗದರ್ಶನ ಮಾಡಿದರು. ಸ್ಥಳೀಯ ವೈದ್ಯರಾದ ಡಾ|| ಪಾಟೀಲ್ ಚಿಕಿತ್ಸೆಗೆ ಸಹಕರಿಸಿದರು.

### ಕೆನರಾ ಬ್ಯಾಂಕ್‌ನಿಂದ ಸಾಲ ವಿತರಣೆ ಸಮಾರಂಭ

ಗ್ರಾಮೀಣ ಅಭಿವೃದ್ಧಿ ಯೋಜನೆಯನ್ವಯ ದುರ್ಬಲ ವರ್ಗದವರಿಗೆ ಸಾಲ ವಿತರಣೆ ಸಮಾರಂಭ ಕೆನರಾ ಬ್ಯಾಂಕ್ ವತಿಯಿಂದ ಇಲ್ಲಿ ಮಾ. 8ರಂದು ನಡೆಯಿತು. ಟಿ. ಎಸ್. ಶಾಮಣ್ಣ ಅಧ್ಯಕ್ಷತೆ ವಹಿಸಿದ್ದು, ಗಜೇಂದ್ರ ಪ್ರಸನ್ನ ಜೋಯ್ಸ್ ಅತಿಥಿಯಾಗಿದ್ದರು.

ಇದೇ ಸಂದರ್ಭದಲ್ಲಿ ಕೆನರಾ ಬ್ಯಾಂಕ್ ಚಿಕ್ಕಮಗಳೂರು ಶಾಖೆಯ ನರಸಿಂಹಮೂರ್ತಿ ಸೊಗಸಾದ ಇಂದ್ರಜಾಲ ಪ್ರದರ್ಶನ ನಡೆಸಿಕೊಟ್ಟರು.

(ವರದಿ : ಟಿ. ವಿ. ವೆಂಕಟಸುಬ್ಬಯ್ಯ)

### ಬಿಳಾಲುಕೊಪ್ಪ ಮಾರುತಿ ಜೇಸೀಸ್ ಆರಂಭ

ಬಿಳಾಲುಕೊಪ್ಪ: ಇಲ್ಲಿ ಜನವರಿ 19ರಂದು ಆರಂಭಿಸಲ್ಪಟ್ಟ ಬಿಳಾಲುಕೊಪ್ಪ ಮಾರುತಿ ಜೇಸೀಸ್ ಘಟಕಕ್ಕೆ ರಾಜ್ಯ ಸಂಸ್ಥೆಯ ಮಾನ್ಯತೆ ಈಚೆಗೆ ದೊರೆತಿದ್ದು, ಈ ಕೆಳಕಂಡವರು ಘಟಕದ ಪದಾಧಿಕಾರಿಗಳಾಗಿದ್ದಾರೆ: ಪಿ ಎಸ್. ಭಟ್ (ಅಧ್ಯಕ್ಷರು), ಜಿ. ಸಿ ಗೋಪಾಲಕೃಷ್ಣ (ಕಾರ್ಯದರ್ಶಿ), ಜಗದೀಶ್ ಗಜ್ಜನಮನೆ, ಟಿ. ಪ್ರಕಾಶ್, ಕು| ಡಿ. ಎಸ್ ಸುನೀತಾ (ಉಪಾಧ್ಯಕ್ಷರು), ಬಿ.ಎನ್. ಭಾಸ್ಕರ್ (ಸಹ ಕಾರ್ಯದರ್ಶಿ) ಮತ್ತು ಟಿ.ಓ. ಥಾಮಸ್ (ಖಜಾಂಚಿ).

## ಕೊಪ್ಪ ತಾ|| ಯುವಜನ ಸಂಘಗಳ ಸಮಾವೇಶ

ಕೊಪ್ಪ ತಾಲ್ಲೂಕಿನ ಯುವಕ ಸಂಘ, ಯುವತಿ ಮಂಡಳಿಗಳ ಅಧ್ಯಕ್ಷ, ಕಾರ್ಯದರ್ಶಿಗಳ ಸಮಾವೇಶ ಮಾ. 12ರಂದು ಕೊಪ್ಪದಲ್ಲಿ ತಾ|| ಯುವಜನ ಕೇಂದ್ರ ಮತ್ತು ತಾ|| ಯುವಜನ ಒಕ್ಕೂಟದ ಆಶ್ರಯದಲ್ಲಿ ನಡೆಯಿತು. ಸಮಾವೇಶದ ಅಧ್ಯಕ್ಷತೆ ವಹಿಸಿದ್ದ ಜಿಲ್ಲಾ ಯುವಜನ ಸೇವಾಧಿಕಾರಿ ಎ. ಆರ್. ಮಂಜುನಾಥ್, ಇಲಾಖೆಯ ಸವಲತ್ತುಗಳ ಬಗ್ಗೆ ಮತ್ತು ಯುವಜನ ಸಂಘಗಳನ್ನು ಪುನಶ್ಚೇತನಗೊಳಿಸುವ ಬಗ್ಗೆ ವಿವರಣೆ ಇತ್ತರು. ತಾ|| ಯುವಕ ಕೇಂದ್ರದಲ್ಲಿರುವ ವಾಚನಾಲಯ, ಗ್ರಂಥಾಲಯ ಮತ್ತು ಆಟಗಳ ಸೌಲಭ್ಯವನ್ನು ಎಲ್ಲಾ ಯುವಕ–ಯುವತಿಯರು ಪಡೆಯಲು ಸೂಚಿಸಿದರು. ಹೊಸ ಸಂಘಗಳ ಸ್ಥಾಪನೆ ಬಗ್ಗೆ ಮತ್ತು ಹಳೇ ಸಂಘಗಳ ಪುನಶ್ಚೇತನದ ಬಗ್ಗೆ ಯುವಕ ಸಂಘಗಳು ಮತ್ತು ಒಕ್ಕೂಟ ಶ್ರಮಿಸಲು ಹಾಗೂ ತಿಂಗಳಿಗೆ ಒಂದಾದರೂ ಶೈಕ್ಷಣಿಕ, ಸಾಮಾಜಿಕ, ಸಾಂಸ್ಕೃತಿಕ ಕಾರ್ಯವನ್ನು ಸಂಘಗಳು ನಡೆಸುವಂತೆ ಕ್ರಮ ಕೈಗೊಳ್ಳಲು ನಿರ್ಣಯಿಸಲಾಯಿತು.

ತಾ|| ಯುವಜನ ಸೇವಾಧಿಕಾರಿ ಆರ್. ದೇವರಾಯ ಸ್ವಾಗತಿಸಿ, ತಾ|| ಯು|| ಒಕ್ಕೂಟದ ಕಾರ್ಯದರ್ಶಿ ಹೆಚ್. ವಿ. ಚಕ್ರಪಾಣಿ ವಂದಿಸಿದರು.

### ಸಿನಿಮಾ ಮಂದಿರದಲ್ಲಿ ಬೀಡಿ ಸೇದಿದ್ದಕ್ಕೆ ದಂಡ

ಶೃಂಗೇರಿ: ಇಲ್ಲಿನ ಪೋಲೀಸರು ಸಿನಿಮಾ ಮಂದಿರದಲ್ಲಿ ಧೂಮಪಾನ ಮಾಡಿದ ಸುಮಾರು 20ಕ್ಕೂ ಹೆಚ್ಚು ಜನರ ಮೇಲೆ ಈವರೆಗೆ ಕೇಸ ಹಾಕಿರುವುದಾಗಿ ತಿಳಿದು ಬಂದಿದೆ.

ಇದೇ ರೀತಿ ಕೊಪ್ಪದ ಪೋಲೀಸ್ ದಫೇದಾರ್ ರಾಮಕೃಷ್ಣಯ್ಯ ಅವರೂ ಕೆಲದಿನಗಳ ಹಿಂದೆ ಕೊಪ್ಪದ ಸಿನಿಮಾ ಮಂದಿರದಲ್ಲಿ ಧೂಮಪಾನ ಮಾಡಿದ ಇಬ್ಬರ ಮೇಲೆ ಮೊಕದ್ದಮೆ ಹೂಡಿ ಅವರಿಬ್ಬರಿಗೂ ತಲಾ 40 ರೂ. ಜುಲ್ಮಾನೆಯಾಯಿತೆಂದು ಗೊತ್ತಾಗಿದೆ.

ಶೃಂಗೇರಿಯಲ್ಲಿ ಕಳೆದ ವರ್ಷಗಳಲ್ಲಿ ಈ ಬಗ್ಗೆ ಇನ್ನೂ ಹೆಚ್ಚು ಮೊಕದ್ದಮೆಗಳನ್ನು ಹಾಕಲಾಗಿತ್ತು ಎಂದೂ ಹೇಳಲಾಗಿದೆ.

### "ಸ್ನೇಹ" ಮಹಿಳಾ ಒಕ್ಕೂಟ

ಕೊಪ್ಪ: ಇಲ್ಲಿ ಈಚೆಗೆ ಆರಂಭವಾದ ತಾ|| ಮಟ್ಟದ "ಸ್ನೇಹ" ಮಹಿಳಾ ಒಕ್ಕೂಟದ ಪದಾಧಿಕಾರಿಗಳು : ಹೆಚ್. ಎಸ್. ಸುಮಿತ್ರಮ್ಮ (ಅಧ್ಯಕ್ಷೆ), ಪ್ರೇಮಾ ರಾವ್ (ಉಪಾಧ್ಯಕ್ಷೆ), ಜಾನಕಿ ನಾಗರಾಜ್ (ಕಾರ್ಯದರ್ಶಿ), ಜಯಲಕ್ಷ್ಮಿ ವಾಸಪ್ಪ (ಸಹ ಕಾರ್ಯದರ್ಶಿ), ಜಯಶ್ರೀ ಶೆಟ್ಟಿ (ಖಜಾಂಚಿ) ಮತ್ತು 12 ಜನ ಡೈರೆಕ್ಟರು.

## ಬೇಗಾರಿನಲ್ಲಿ ಮನೆಗೆ
# ನುಗ್ಗಿ ಹಲ್ಲೆ, ಲೂಟಿ

(ವರದಿ: ಎಸ್.ಕೆ. ಶ್ರೀಕಾಂತ್)

ಬೇಗಾರು: ಇಲ್ಲಿನ ಪ್ರೌಢಶಾಲಾ ಗುಮಾಸ್ತರಾದ (ಸದ್ಯ ಅಧ್ಯಾಪಕರು) ದೇವೇಗೌಡ ಎಂಬವರ ಮನೆಗೆ ಮಾ. 9ರ ರಾತ್ರಿ 7 ಗಂಟೆಯ ಹೊತ್ತಿಗೆ ಅವರು ಯಾರೂ ಮನೆಯಲ್ಲಿಲ್ಲದಿದ್ದಾಗ ಮೂವರು ಅಪರಿಚಿತರು ನುಗ್ಗಿ, ಅವರ ತಮ್ಮ ಸೋಮಶೇಖರ ಎಂಬ ವಿದ್ಯಾರ್ಥಿಯ ಮೇಲೆ ತೀವ್ರವಾಗಿ ಹಲ್ಲೆ ಮಾಡಿದ್ದಾರೆ. ಇದರಿಂದ ಸೋಮಶೇಖರನಿಗೆ ಬಲಗೈ, ಬಲಗಾಲಿಗೆ ತೀವ್ರ ಪೆಟ್ಟಾಗಿದೆ.

ದುಷ್ಕರ್ಮಿಗಳು ಮನೆಯಲ್ಲಿದ್ದ ಹಲವು ವಸ್ತುಗಳನ್ನು ಪುಡಿಮಾಡಿ, ಬಟ್ಟೆಗಳನ್ನು ಚಿಂದಿ ಮಾಡಿದ್ದಾರೆ. ಸೋಮಶೇಖರನ ಪ್ರವೇಶ ಪತ್ರವನ್ನು ಸಹ ಹರಿದಿದ್ದಾರೆಂದು ತಿಳಿದು ಬಂದಿದೆ.

ನೆರೆಹೊರೆಯವರು ಬಂದು ಸೇರುವಷ್ಟರಲ್ಲಿ ಅವರುಗಳು ಸೀಟಿ ಊದಿಕೊಂಡು ಪರಾರಿಯಾಗಿದ್ದಾರೆ. ಇದು ಯಾರಾದರೂ ದರೋಡೆಕೋರರ ಕೆಲಸವೋ ಅಥವಾ ವೈಯಕ್ತಿಕ ದ್ವೇಷದ ಹಲ್ಲೆಯೋ ಎಂಬುದು ಗೊತ್ತಾಗಿಲ್ಲ.

### ಗ್ಯಾಂಗ್‌ಮನ್‌ಗಳ ಧರಣಿ

(3ನೇ ಪುಟದಿಂದ)

ರದಿಂದ ಪೂರೈಕೆಯಿಲ್ಲದಿದ್ದು, ಈ ಬಗ್ಗೆ ಸಂಬಂಧಪಟ್ಟ ಅಧಿಕಾರಿಗಳಿಗೆ ಒರೆಯುವುದಾಗಿ ಭರವಸೆ ಕೊಟ್ಟರು.

ಈ ವಿಚಾರಗಳನ್ನು ಸದರಿ ಕಾರ್ಮಿಕರ ಸಂಘದ ಕಾರ್ಯದರ್ಶಿ ಎನ್. ಆರ್. ರಾಮಚಂದ್ರ 'ಮುಂಜಾವು'ಗೆ ತಿಳಿಸಿದ್ದಾರೆ.

### ಅಡ್ಡಗದ್ದೆ ಶಾಲೆ ವಾರ್ಷಿಕೋತ್ಸವ

ಅಡ್ಡಗದ್ದೆ: ಇಲ್ಲಿ ಇತ್ತೀಚೆಗೆ ನಡೆದ, ಮಾದರಿ ಹಿ.ಪ್ರಾ. ಶಾಲೆ ಮತ್ತು ಶ್ರೀ ವಿನಾಯಕ ಯುವಕ ಸಂಘದ ವಾರ್ಷಿಕೋತ್ಸವದ ಅಂಗವಾಗಿ ಯುವಕರ ಗ್ರಾಮಾಂತರ ಕ್ರೀಡಾಕೂಟ ಮತ್ತು ಶಾಲಾ ಮಕ್ಕಳಿಗೆ ವಿವಿಧ ಪಠ್ಯ ಮತ್ತು ಶೈಕ್ಷಣಿಕ ಸ್ಪರ್ಧೆಗಳನ್ನು ನಡೆಸಲಾಯಿತು.

### ಸಕಲೇಶಪುರ ಏಲಕ್ಕಿ ಧಾರಣೆ

| ವ್ಯಾಪಾರದ ತಾರೀಖು | ಗರಿಷ್ಠ ಧಾರಣೆ | ಸರಾಸರಿ ಧಾರಣೆ |
|---|---|---|
| 24.3.86 | 169 | 72 |
| 27.3.86 | 163 | 80 |
| 28.3.86 | 179 | 90 |

### ಶಿವಮೊಗ್ಗ ಅಡಿಕೆ ಪೇಟೆ

ತಾರೀಖು: 15.3.1986

ಸರಕು: 2800 – 3100
ಬೆಟ್ಟೆ: 1800 – 2160
ಗೊರಬಲು: 1000 – 1700

### ಶಾಲೆಗೆ ದಾನಿಗಳ ಕೊಡುಗೆ

ಕೊಪ್ಪ: ಅಡಿಗೆಬೈಲು ಸ. ಹಿ. ಪ್ರಾ. ಶಾಲೆಯಲ್ಲಿ ಫೆ. 21ರಂದು ನಡೆದ ಶಾಲಾ ವಾರ್ಷಿಕೋತ್ಸವದ ಸಂದರ್ಭದಲ್ಲಿ ಹೊವಿನಹಕ್ಲು ಕಾಫಿ ಬೆಳೆಗಾರರಾದ ಹೆಚ್.ಬಿ. ರಾಜಗೋಪಾಲ್ ಅವರು ಶಾಲೆಗೆ 12 ಬೆಂಚುಗಳನ್ನು ಕೊಡುವ ಆಶ್ವಾಸನೆಯಿತ್ತರು. ಈ ಸಮಾರಂಭದಲ್ಲಿ ಶಾಲೆಗೆ ಉಚಿತವಾಗಿ ಪೀಠೋಪಕರಣಗಳನ್ನು ನೀಡಿದ ಹೊಳೆಮಕ್ಕಿ ಚಿನ್ನಯ್ಯ, ಉಪ್ಪಿನೆ ಶೇಷಪ್ಪ ನಾಯ್ಕ, ಉಳುವೆ ವೆಂಕಟಪ್ಪ ಗೌಡ, ಸರಗಳಲೆ ಶಿವಪ್ಪ, ಕೋಣೆಮನೆ ನಾಗರಾಜು ಇವರುಗಳನ್ನು ಶಾಲಾ ತನಿಖಾಧಿಕಾರಿಗಳಾದ ಬಿ.ಶಿವಮೂರ್ತಿಯವರು ಫಲ ತಾಂಬೂಲ ನೀಡಿ ಸನ್ಮಾನಿಸಿದರು. ಅವರು ಊರಿನ ಶಾಲೆಯ ಅಭಿವೃದ್ಧಿಗೆ ನೆರವಾಗಲು ಸಾರ್ವಜನಿಕರಿಗೆ ಮನವಿ ಮಾಡಿದರು.

### ಜೇನು ಸಾಕಣೆ ತರಬೇತಿ

ಶೃಂಗೇರಿ: ನೆಮ್ಮಾರಿನಲ್ಲಿ ಕೇಂದ್ರ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಆಶ್ರಯದಲ್ಲಿ ಗಿರಿಜನರಿಗೆ ಜೇನು ಸಾಕಣೆ ತರಬೇತಿ ಶಿಬಿರವೊಂದನ್ನು ಎಂ.ಸಿ.ಗೋಪಾಲ್ ಈಚೆಗೆ ನಡೆಸಿದರು.

ಕಳೆದ ವರ್ಷ 2 ತಿಂಗಳ ಸ್ಟೈಪೆಂಡ್ ಸಹಿತ ತರಬೇತಿ ಪಡೆದಿದ್ದ 15 ಜನರೂ ಸೇರಿ 50 ಜನ ಇದರಲ್ಲಿ ಭಾಗವಹಿಸಿದ್ದರು.

### ಹಲ್ಲೆಗೊಳಗಾದವರನ್ನು ಆಸ್ಪತ್ರೆಗೆ ಸೇರಿಸಿಕೊಳ್ಳಲು ನಿರಾಕರಿಸಿದ ದೂರು

ಕೊಪ್ಪ: ಇಲ್ಲಿಗೆ ಸಮೀಪದ ಬಿಂತ್ರವಳ್ಳಿಯ ಶೇಷಪ್ಪಗೌಡ ಎಂಬವರ ಮೇಲೆ ಮಾ. 5ರಂದು ರಾತ್ರಿ ಜೋಗಿಸರದ ಮಂಜಭಟ್ಟ, ಗೋಪಾಲ ಮತ್ತು ಇತರ ಐದಾರು ಮಂದಿ ಕಣ್ಣಿಗೆ ಮೆಣಸಿನ ಪುಡಿ ಎರಚಿ ಹಲ್ಲೆ ನಡೆಸಿದ್ದಾಗಿ ಪೋಲೀಸರಿಗೆ ದೂರು ನೀಡಿದ್ದು, ಮಂಜಭಟ್ಟ ಪೋಲೀಸರಿಗೆ ಇನ್ನೂ ಸಿಕ್ಕಿಲ್ಲವೆನ್ನಲಾಗಿದೆ.

ಅಂದು ರಾತ್ರಿ 11ರ ಹೊತ್ತಿಗೆ ಆಸ್ಪತ್ರೆಗೆ ಹೋದಾಗ ಸ್ಥಳೀಯ ವೈದ್ಯರು ಇರಲಿಲ್ಲವೆಂದೂ ಆಸ್ಪತ್ರೆ ಸಿಬ್ಬಂದಿ ತನ್ನನ್ನು ಆಸ್ಪತ್ರೆಗೆ ಸೇರಿಸಿಕೊಂಡು ತಕ್ಷಣ ಚಿಕಿತ್ಸೆ ನೀಡುವ ಬದಲು ಸ್ಟೇಶನ್ನಿಗೆ ಹೋಗಲು ಹೇಳಿದರೆಂದೂ, ಅಲ್ಲಿ ಹೋಗಿ ದೂರು ಕೊಟ್ಟು ಪೋಲೀಸರೊಂದಿಗೆ ಡಾಕ್ಟರ ಮನೆಗೆ ಹೋದರೆ ಅಲ್ಲೂ ಅವರು ಇಲ್ಲವೆಂದು ತಿಳಿಸಿದರೆಂದೂ ಕೊನೆಗೆ ಮಹಿಳಾ ವೈದ್ಯಾಧಿಕಾರಿಯವರೇ ತನಗೆ ಹೊರರೋಗಿಯಾಗಿ ಚಿಕಿತ್ಸೆ ನೀಡಿ ಮನೆಗೆ ಕಳಿಸಿದರೆಂದೂ ಶೇಷಪ್ಪ ಗೌಡ ದೂರಿದ್ದಾರೆ.